

# ವಿಚಿತ್ರ ಪುಷ್ಪ

ನಮ್ಮ ದೇಶದ ಈಸಾನ್ಯದ ಪ್ರಾಂತ್ಯದಲ್ಲಿರುವ ಮಾಣಿಕ್ಯಪುರಿ ರಾಜ್ಯದಲ್ಲಿ ವಸಂತ ಋತುವಿಗೆ ಸ್ವಾಗತ ಹೇಳುವ, ವಸಂತೋತ್ಸವಗಳು ಪ್ರತಿ ವರ್ಷ ಒಂದು ತಿಂಗಳ ಕಾಲ ನಡೆಯುತ್ತಿತ್ತು. ವಸಂತ ಋತು ಬಂದಾಗ ಬೆಟ್ಟಗಳ ನಡುವೆ ಇದ್ದ ಮಾಣಿಕ್ಯಪುರಿ, ಹೊಸ ಬೆಳಕನ್ನು ಗಿಡ ಮರಗಳಿಂದ ನೂತನ ಶೋಭೆಯನ್ನು ಪಡೆಯುತ್ತಿತ್ತು. ಅದಕ್ಕೆ ಕೆಲವು ಸಾವಿರ ವರ್ಷಗಳಿಂದ ಅಲ್ಲಿ ವಸಂತೋತ್ಸವವನ್ನು ವಿಜೃಂಭಣೆಯಿಂದ ನಡೆಸುತ್ತಿದ್ದರು.

ಮಾಣಿಕ್ಯಪುರಿ ಅರಸ ಪ್ರತಾಪವರ್ಮ ಆದರ್ಶ ಪ್ರಭುವಾಗಿ ಕೀರ್ತಿ ಹೊಂದಿದ್ದ. ತಂದೆ ಪುಷ್ಪವರ್ಮನ ಕೋರಿಕೆಯಂತೆ ಪ್ರತಾಪವರ್ಮ ಅತಿ ಚಿಕ್ಕ ಪ್ರಾಯದಲ್ಲೇ ಮಾಣಿಕ್ಯಪುರಿ ಸಿಂಹಾಸನವನ್ನು ಏರಿ, ಪ್ರಜಾರಂಜಕನಾಗಿ ರಾಜ್ಯಪಾಲನೆ ಮಾಡಿ ತಂದೆಗೆ ಆನಂದ ನೀಡಿ, ಅವರ ಮೆಚ್ಚುಗೆ ಗಳಿಸಿದ.

ರಾಜ ಪ್ರತಾಪವರ್ಮ ತಂದೆಗೆ ತಕ್ಕ ಮಗನಾಗಿ, ಶೀಘ್ರ ಕಾಲದಲ್ಲೇ ಪ್ರಜೆಗಳ ಆದರಾಭಿಮಾನಗಳಿಗೆ ಪಾತ್ರನಾದ. ತನ್ನ ರಾಜ್ಯದಲ್ಲಿ ಶಾಂತಿ ಭದ್ರತೆಗಳು ನೆಲೆಸಲು ಮಾತ್ರವಲ್ಲ, ಅಕ್ಕ ಪಕ್ಕದ ರಾಜ್ಯಗಳೊಂದಿಗೆ ಸತ್ಸಂಬಂಧಗಳು ನೆಲೆಸುವಂತೆ ಮಾಡಿದ. ಈ ಕಾರಣದಿಂದ ಪ್ರಜೆಗಳು ಯುದ್ಧ ಭಯವಿಲ್ಲದೆ ಸುಖ ಸಂತೋಷದಿಂದ ಬಾಳುತ್ತಿದ್ದರು.

ದೇಶದಲ್ಲಿ ಶಾಂತಿ ಭದ್ರತೆಗೆ ಕೊರತೆ ಇಲ್ಲದ ಕಾರಣ ಅವಕಾಶ ದೊರೆತಾಗಲೆಲ್ಲಾ ಪ್ರಜೆಗಳು ವಿನೋದ ಕಾರ್ಯಕ್ರಮಗಳಲ್ಲಿ ಆಸಕ್ತಿ ತೋರಿಸುತ್ತಿದ್ದರು. ಮುಖ್ಯವಾಗಿ ಪ್ರತೀ ವರ್ಷ ನಡೆಯುವ ವಸಂತೋತ್ಸವದಲ್ಲಿ ಅಮಿತೋತ್ಸಾಹದಿಂದ ಪಾಲು ತೆಗೆದುಕೊಳ್ಳುತ್ತಿದ್ದರು. ವಸಂತೋತ್ಸವ ಅವರಿಗೆ ನಾಡ ಹಬ್ಬವಾಗಿತ್ತು. ಪ್ರತೀ ಮನೆಯಲ್ಲೂ, ವಸಂತ ಋತು ನಕ್ಕು ನಲಿಯುತ್ತಿತ್ತು. ಬಡವ ಬಲ್ಲಿದ ಎಂಬ ಭೇದವಿಲ್ಲದೆ ಎಲ್ಲರೂ ಒಗ್ಗಟ್ಟಿನಿಂದ ಒಮ್ಮತದಿಂದ ಆನಂದದಿಂದ ಆಚರಿಸು



ತ್ತಿದ್ದರು. ಪ್ರಜೆಗಳ ಈ ಒಗ್ಗಟ್ಟು ಒಮ್ಮತಗಳೇ ರಾಜ್ಯದ ಅಭಿವೃದ್ಧಿಗೆ ಮೂಲ ಕಾರಣವಾಗಿತ್ತು.

ಪ್ರತಾಪ ವರ್ಮ ಮಾಣಿಕ್ಯಪುರಿ ಸಿಂಹಾಸನ ವನ್ನು ಅಲಂಕರಿಸಿ ಇಪ್ಪತ್ತೈದು ವರ್ಷಗಳು ಪೂರ್ತಿ [illegible]ದಲ್ಲಿ ಆ ವರ್ಷ ವಸಂತೋತ್ಸವವನ್ನು ಮತ್ತಷ್ಟು ಘನವಾಗಿ ನಡೆಸಲು ಏರ್ಪಾಡುಗಳು ನಡೆದುವು. ಕೇವಲ ಕ್ರೀಡಾ ಸ್ಪರ್ಧೆಗಳು ಮಾತ್ರ ವಲ್ಲದೆ, ಸಂಗೀತ, ಸಾಹಿತ್ಯ, ನಾಟ್ಯ, ಚಿತ್ರಕಲೆ ಮುಂತಾದ ಲಲಿತ ಕಲೆಗಳಲ್ಲೂ ಸ್ಪರ್ಧೆಗಳನ್ನು ಏರ್ಪಡಿಸಿದರು. ಪ್ರತ್ಯೇಕ ಅಂಶವಾಗಿ ಕವಿಗಳು, ಪಂಡಿತರು, ಪಾಲ್ಗೊಳ್ಳುವ ಕವಿ ಸಮ್ಮೇಳನವನ್ನು ಕೂಡ ಏರ್ಪಡಿಸಿದರು. ಈ ಉತ್ಸವಗಳಲ್ಲಿ ಭಾಗ ವಹಿಸಲು ಅಕ್ಕಪಕ್ಕದ ರಾಜ್ಯದಲ್ಲಿರುವ ಕ್ರೀಡಾಪಟು ಗಳಿಗೆ, ಕಲಾವಿದರಿಗೆ, ಪಂಡಿತರಿಗೆ, ಕವಿಗಳಿಗೆ ಕೂಡಾ ಆಹ್ವಾನ ಕಳುಹಿಸಿದರು. ಆ ಕರೆಗೆ ಓಗೊಟ್ಟು ಮಾಣಿಕ್ಯಪುರಿಗೆ ಅನೇಕ ರಾಜ್ಯಗಳಿಂದ ಕಲಾವಿದರು, ವಿದ್ವಾಂಸರು, ಕವಿಗಳು, ಪಂಡಿತರು, ಕ್ರೀಡಾಪಟುಗಳು ಉತ್ಸಾಹದಿಂದ ಬರತೊಡಗಿದರು.. ರಾಜನ ಪರಿವಾರದವರು ಬಂದ ಅತಿಥಿಗಳನ್ನು ರಾಜಮರ್ಯಾದೆಯಿಂದ ಸ್ವಾಗತಿಸಿ ಅವರಿಗೆ ಎಲ್ಲಾ ಅನುಕೂಲಗಳನ್ನು ಒದಗಿಸುತ್ತಿದ್ದರು.

ಮೊದಲು ಕ್ರೀಡಾ ಸ್ಪರ್ಧೆಗಳು ಆರಂಭವಾದವು. ಆ ಸ್ಪರ್ಧೆಗಳಲ್ಲಿ ಮೊದಲಿನಿಂದಲೂ ಒಬ್ಬ ಬೆಟ್ಟದ ಜಾತಿ ಯುವಕ ಬಹಳ ಸ್ಪರ್ಧೆಗಳಲ್ಲಿ ವಿಜಯ ಸಾಧಿಸಿ, ಎಲ್ಲರ ದೃಷ್ಟಿಯನ್ನೂ ಆಕರ್ಷಿಸಿದ. ಮೊದಲು ಮಲ್ಲಯುದ್ಧದಲ್ಲಿ ಜಯಿಸಿದ. ಆಮೇಲೆ ಬೆತ್ತದ ಕೋಲಿನಿಂದ ಆಡುವ "ಕುಂಜೀ" ಆಟದಲ್ಲೂ ಜಯಶೀಲನಾದ. ಆ ವರ್ಷ ಹೊಸದಾಗಿ ಒಂದು ಕ್ರೀಡಾ ಸ್ಪರ್ಧೆಯನ್ನು ಪರಿಚಯ ಮಾಡಿದರು. ಒಂದು ದೃಢವಾದ ಕೊಬ್ಬರಿ ಗಿಟುಕನ್ನು, ನೆಲದ ಮೇಲೆ ಹಾಕಿ, ಕುದುರೆಯ ಮೇಲೆ ಬರುತ್ತಾ, ಕೈಯಲ್ಲಿರುವ ಕೋಲಿನಿಂದ ಚೆಂಡಿನಂತಿರುವ ಆ ಕೊಬ್ಬರಿ ಗಿಟುಕನ್ನು ಹೊಡೆಯಬೇಕು. ಆ ಆಟದ ಹೆಸರು "ಲಕ್ವಿ". ಆ ನೂತನ ಕ್ರೀಡಾಸ್ಪರ್ಧೆ ಯಲ್ಲೂ ಆ ಯುವಕ ತನ್ನ ವೃಂದಕ್ಕೆ ನಾಯಕತ್ವ ವಹಿಸಿ ಅತಿ ಚತುರತೆಯಿಂದ ಕುದುರೆ ಸವಾರಿ ಮಾಡುತ್ತಾ ಎಷ್ಟೋ ಚಾಕ್ಯೆಯಿಂದ ಚೆಂಡನ್ನು ಹೊಡೆದು ವಿಜಯ ಸಾಧಿಸಿದ. ಅವನ ಈ ವಿಜಯವನ್ನು ಕುತೂಹಲದಿಂದ ನೋಡುತ್ತಿದ್ದ ವರೆಲ್ಲ ಹರ್ಷಧ್ವನಿ ಮಾಡಿದರು.

ಕ್ರೀಡಾಸ್ಪರ್ಧೆಗಳು ಮುಗಿದ ಮೇಲೆ ಬಹುಮಾನ ಪ್ರಧಾನೋತ್ಸವ ನಡೆಯಿತು. ರಾಜ ಪ್ರತಾಪವರ್ಮನು ಸ್ವಯಂ ಬಂದು ಗೆದ್ದವರಿಗೆ ಬಹುಮಾನಗಳನ್ನು ನೀಡಿದ. ಅನೇಕ ಬಹುಮಾನಗಳನ್ನು ಪಡೆದ ಆ ಬೆಟ್ಟದ ಜಾತಿ ಯುವಕನನ್ನು ಅರಸನು ಅಪ್ಪಾ,



ಯತೆಯಿಂದ ನೋಡುತ್ತಾ "ನಿನ್ನ ಹೆಸರೇನು?" ಎಂದು ಕೇಳಿದನು.

"ನನ್ನ ಹೆಸರು ಉತ್ತುಂಗ ಪ್ರಭೂ" ಎಂದು ವಿನಯದಿಂದ ಉತ್ತರವನ್ನು ಕೊಟ್ಟು, ತನ್ನೊಂದಿಗೆ ಬಂದವರನ್ನು ತಿರುಗಿ ನೋಡಿ, ತನ್ನ ಮಿತ್ರ ವೃಂದದವರನ್ನು ರಾಜನಿಗೆ ತೋರಿಸಿ "ಇವರೆಲ್ಲರೂ ನನ್ನೊಂದಿಗೆ ಬಂದ ಮಿತ್ರರು. ನಾವು 'ಶೃಂಗ್ಯಾಯ್' ಬೆಟ್ಟದಲ್ಲಿರುವ ಉತ್ತುಂಗ ಪಂಗಡಕ್ಕೆ ಸೇರಿದವರು ಪ್ರಭೂ! ತಮ್ಮ ರಾಜ್ಯದಲ್ಲಿ ನಡೆಯುವ ಈ ಸ್ಪರ್ಧೆಯಲ್ಲಿ ಮೊದಲ ಬಾರಿಗೆ ಪಾಲ್ಗೊಂಡಿದ್ದೇವೆ" ಎಂದನು.

ರಾಜ ಮಂದಹಾಸ ಬೀರಿದ.

ಉತ್ತುಂಗನು ಹಿಂದಕ್ಕೆ ತಿರುಗಿ ತನ್ನ ಮಿತ್ರನೊಬ್ಬನ ಕೈಯಲ್ಲಿರುವ ಪುಷ್ಪಗುಚ್ಛವನ್ನು ತೆಗೆದುಕೊಂಡು ಸರಸರನೆ ಮೆಟ್ಟಿಲು ಹತ್ತಿ, ವೇದಿಕೆಯ ಮೇಲಿರುವ ಯುವರಾಣಿ ಪ್ರಿಯಂವದನೆಯನ್ನು ಸಮೀಪಿಸಿ ಅವಳಿಗೆ ನಮಸ್ಕರಿಸಿದನು. ಅನಂತರ "ತಮಗೆ ಹೂಗಳೆಂದರೆ ತುಂಬ ಇಷ್ಟವೆಂದು ತಿಳಿಯಿತು. ಇವು ನಮ್ಮ ಪ್ರಾಂತ್ಯದಲ್ಲಿ ಅರಳುವ ಅಪೂರ್ವವಾದ ಹೂಗಳು. ದಯವಿಟ್ಟು ಸ್ವೀಕರಿಸಿ" ಎಂದು ಹೇಳಿ ಆ ಪುಷ್ಪಗುಚ್ಛವನ್ನು ಯುವರಾಣಿಗೆ ಸಮರ್ಪಿಸಿ ವೇದಿಕೆಯಿಂದ ಕೆಳಗೆ ಇಳಿದು ಬಂದ.

ಯುವರಾಣಿ ಪುಷ್ಪಗುಚ್ಛವನ್ನು ಮುಗುಳ್ನಗೆಯಿಂದ ಸ್ವೀಕರಿಸಿ, ಆ ಹೂಗಳನ್ನು ತದೇಕ ದೃಷ್ಟಿಯಿಂದ ತನ್ಮಯಳಾಗಿ ನೋಡಿದಳು. 'ಅಬ್ಬಾ! ಎಷ್ಟು ಸುಂದರವಾಗಿದೆ ಈ ಪುಷ್ಪಗುಚ್ಛ. ಅಂದದೊಂದಿಗೆ ಸುವಾಸನೆಯೂ ಮಿಳಿತವಾಗಿದೆ. ತಳತಳನೆ ಹೊಳೆಯುತ್ತಿರುವ ಈ ಹೂಗಳನ್ನು ಕಂಡರೆ ಮುದುಡಿದ ಮನವೂ ಅರಳುವುದು. ಜಗತ್ತಿನ ದುಃಖ ಮರೆಯುವುದು. ಪ್ರಪಂಚದಲ್ಲಿರುವ ಅಪೂರ್ವವಾದ ಹೂಗಿಡಗಳು ನಮ್ಮ ಉದ್ಯಾನವನದಲ್ಲಿ ಇವೆ. ಆದರೆ, ಈ ಅದ್ಭುತ ಅಪೂರ್ವ ಗಿಡ ಇಲ್ಲ' ಎಂದು ತನ್ನಲ್ಲೇ ಹೇಳಿಕೊಂಡು ನಂತರ ತಂದೆಯತ್ತ ತಿರುಗಿ, ಮುಗುಳ್ನಗೆ ಬೀರಿ, "ಅಪ್ಪಾ! ಇಷ್ಟು ಅಂದವಾದ ಹೂಗಳನ್ನು ನಾನು ಎಂದೂ ನೋಡಿರಲಿಲ್ಲ. ಈ ಹೂವಿನ ಗಿಡ ನಮ್ಮ ಉದ್ಯಾನವನದಲ್ಲೂ ಇಲ್ಲ" ಎಂದಳು.

ಹೌದೆಂಬಂತೆ ಅರಸ ತಲೆ ತೂಗಿದ.

ಸ್ವಲ್ಪ ಸಮಯದ ನಂತರ ಬಹುಮಾನ ಪ್ರದಾನೋತ್ಸವ ಮುಗಿಯಿತು. ಆಗ ಅರಸ ಪ್ರಜೆಗಳನ್ನು ಉದ್ದೇಶಿಸಿ ಹೀಗೆ ಹೇಳಿದ "ಪ್ರಿಯರಾದ ಪ್ರಜೆಗಳೇ! ಈ ವರ್ಷ ವಸಂತೋತ್ಸವಗಳನ್ನು ಇಷ್ಟು ಘನವಾಗಿ ನಿರ್ವಹಿಸಿದ್ದಕ್ಕೆ ನನಗೆಷ್ಟೋ ಆನಂದವಾಗಿದೆ. ಮುಖ್ಯವಾಗಿ ನೀವು ನಿರ್ವಹಿಸಿದ ಕ್ರೀಡಾಸ್ಪರ್ಧೆಗಳು ಪ್ರಶಂಸನೀಯ. ಅದರಲ್ಲಿ

ಭಾಗವಹಿಸಿದ ಬೆಟ್ಟದ ಜಾತಿಯ ಯುವಕರು ಪ್ರದರ್ಶಿಸಿದ ಜಾಣ್ಮೆ ಅಮರ ನಾಯಕ ಉತ್ತುಂಗನು ತೋರಿದ ನೈಪುಣ್ಯ ಹೊಗಳಬೇಕಾದದ್ದು. ಅದಕ್ಕೆ ಈ ವರ್ಷ ಆರಂಭಿಸಿದ ನೂತನ ಕ್ರೀಡೆಗೆ ಆ ಬೆಟ್ಟದ ಪ್ರಜೆಗಳು ನಿವಸಿಸುವ "ಶೃಂಗ್ಯಾಯ್" ಪ್ರಾಂತ್ಯದ ಹೆಸರಿನ ಮೇಲೆ "ಮಾಯ್‌ಕ್ರೀಡೆ" ಎಂದು ನಾಮಕರಣ ಮಾಡುತ್ತಿದ್ದೇನೆ. ಅಷ್ಟೇ ಅಲ್ಲ ಈ ವರ್ಷದಿಂದ ನಮ್ಮ ಸೈನ್ಯದಲ್ಲಿ ಈ ಬೆಟ್ಟದ ಜಾತಿ ಯುವಕರಿಗೂ ಸ್ಥಾನ ಕಲ್ಪಿಸುತ್ತಿದ್ದೇನೆ. ನಾಳೆ ವಸಂತೋತ್ಸವದ ಕಡೆಯ ದಿನ. ಅದರಿಂದ ಪ್ರತಿ ವರ್ಷದಂತೆ ಅರಮನೆಯ ಬಾಗಿಲು ತೆರೆದೇ ಇರುತ್ತದೆ. ನೀವು ಯಾರು ಬೇಕಾದರೂ ನಿರಭ್ಯಂತರ ವಾಗಿ ಅರಮನೆಗೆ ಬಂದು ರಾಜ ಕುಟುಂಬದೊಂದಿಗೆ ಹಾಯಾಗಿ ಕಲೆತು ಬೆರೆತು ತಿರುಗಬಹುದು. ಪ್ರಜೆಗಳ ಅಭಿಮಾನವೇ ಅರಸನಿಗೆ ಶ್ರೀರಕ್ಷೆ ಎಂದು ತಿಳಿದಿರುವ ರಾಜ ಕುಟುಂಬದವರು, ರಾಜ ಪ್ರಾಸಾದ ದಲ್ಲಿ ನಿಮ್ಮೆಲ್ಲರನ್ನು ಪ್ರೀತಿಯಿಂದ ಸ್ವಾಗತಿಸಲು ಕಾದಿರುತ್ತಾರೆ. ಲೈರಂಬಿ ಮಾತೆಯು ನಮ್ಮೆಲ್ಲ ರನ್ನೂ ರಕ್ಷಿಸಲಿ!"

ಆ ಮಾತುಗಳನ್ನು ಕೇಳಿ ಅಲ್ಲಿ ನೆರೆದಿದ್ದ ಜನಸ್ತೋಮದಿಂದ "ರಾಜ ಪ್ರತಾಪವರ್ಮನು ಬಾಳಲಿ! ಯುವರಾಣಿ ಪ್ರಿಯಂವದ ಬಾಳಲಿ" ಎಂಬ ನಿನಾದಗಳು ಆಕಾಶವನ್ನು ಮುಟ್ಟಿತು.

ರಾಜನೂ, ಯುವರಾಣಿಯೂ ಬೇರೆ ಬೇರೆ ರಥಗಳಲ್ಲಿ ರಾಜಭವನಕ್ಕೆ ಹೊರಟರು. ರಾಜನ ರಥದಲ್ಲಿ ಆತನೊಂದಿಗೆ ಸೇನಾನಾಯಕ ಗಂಭೀರ ಸಿಂಹನೂ, ಯುವರಾಣಿ ರಥದಲ್ಲಿ ಆಕೆಯ ಸಂಗಡ ಇಬ್ಬರು ಸಖಿಯರೂ ಇದ್ದರು. ನಗರದ ಪ್ರಧಾನ ಬೀದಿಗಳಲ್ಲಿ ರಥಗಳು ಸಾಗುತ್ತಿರುವಾಗ ಬೀದಿಯ ಎರಡೂ ಕಡೆ ಪ್ರಜೆಗಳು ಸಾಲಾಗಿ ನಿಂತು ಕೈ



ಜೋಡಿಸಿ ಅವರಿಗೆ ಶುಭವನ್ನು ಹಾರೈಸಿದರು.

ರಾಜಭವನಕ್ಕೆ ಬಂದೊಡನೆ ಯುವರಾಣಿ ಪ್ರಿಯಂವದ ಸಖಿಯರನ್ನು ಕರೆದು, ಹೂಗೊಂಚಲನ್ನು ಇಡುವ ದೊಡ್ಡ ಹೂಕುಂಡವನ್ನು ತರಲು ಹೇಳಿ, ಉತ್ತುಂಗನು ಕೊಟ್ಟ ಹೂಗಳನ್ನು ಅದರಲ್ಲಿ ತಾನೇ ಜೋಡಿಸಿದಳು. ಅಂದವಾದ ಆ ಪುಷ್ಪಗಳಿಗೆ ಈಗ ಮತ್ತಷ್ಟು ಅಂದ ಬಂದದ್ದು ನೋಡಿ, ಯುವರಾಣಿಗೆ ಆನಂದ ಉಕ್ಕಿತು. 'ಹೂಕುಂಡದಲ್ಲೇ ಇಷ್ಟು ಸುಂದರವಾಗಿ ಶೋಭಿಸುವ ಈ ಹೂಗಳು ಗಿಡದಲ್ಲಿ ಅದೆಷ್ಟು ಶೋಭಾಯಮಾನವಾಗಿ ಇರಬಹುದು. ತಂದೆಯ ಬಳಿ ಹೇಳಿ ಈ ಗಿಡವನ್ನು ತರಿಸಿ ನಮ್ಮ ಉದ್ಯಾನವನದಲ್ಲಿ ನೆಡಬೇಕು' ಎಂದು ಮನದಲ್ಲೇ ನಿರ್ಧರಿಸಿಕೊಂಡಳು ಯುವರಾಣಿ ಪ್ರಿಯಂವದ.

ಮರುದಿನ ಬೆಳಿಗ್ಗೆ ನಗರದ ನಾಲ್ಕು ಕಡೆ ಯಿಂದಲೂ ಪ್ರಜೆಗಳು ಅರಮನೆಯ ಕಡೆ ತಂಡೋಪ



ತಂಡವಾಗಿ ಬರಲು ಆರಂಭಿಸಿದರು. ರಾಜ, ಯುವರಾಣಿ, ರಾಜಬಂಧುಗಳು ಮತ್ತೆ ಕೆಲವು ಮಾಳಿಗೆಯ ಮೇಲೆ ನಿಂತು ಕೈ ಆಡಿಸುತ್ತಾ ಪ್ರಜೆಗಳ ಶುಭಾಕಾಂಕ್ಷೆಗಳನ್ನು ಸ್ವೀಕರಿಸಿದರು.

ಯುವತೀಯುವಕರು ಒಬ್ಬರ ಮೇಲೆ ಒಬ್ಬರು ಬಣ್ಣ ಬಣ್ಣದ ನೀರು, ಪುಡಿಗಳನ್ನು ಚೆಲ್ಲುತ್ತಾ ಆನಂದದಿಂದ ಹಾಡುತ್ತಾ ನೃತ್ಯ ಮಾಡುತ್ತಾ ಆ ದಿನವೆಲ್ಲಾ ಸಂತೋಷವಾಗಿ ಕಳೆದರು.

ಸಂಜೆ ಉತ್ಸವದ ಗಡಿಬಿಡಿ ಕಡಿಮೆಯಾದ ನಂತರ ರಾಜ, ಸೇನಾಧಿಪತಿಯನ್ನು ಕರೆದು "ಮೊನ್ನೆ ಶೃಂಗ್ಯಾಯ್ ಬೆಟ್ಟದ ಪ್ರಾಂತ್ಯದಿಂದ ಬಂದ ಉತ್ತುಂಗನು ಯುವರಾಣಿಗೆ ಕೊಟ್ಟ ಹೂಗಳನ್ನು ನೀನು ನೋಡಿದೆಯಲ್ಲವೇ? ಆ ಹೂಗಿಡವನ್ನು ನಮ್ಮ ಉದ್ಯಾನವನದಲ್ಲಿ ಬೆಳೆಸಲು ಪ್ರಿಯಂವದ ಆಶಿಸುತ್ತಿದ್ದಾಳೆ. ಆದ್ದರಿಂದ ನಮ್ಮ ಸೈನ್ಯದಲ್ಲಿ ಇಬ್ಬರು ಸಮರ್ಥರಾದ ಯುವಕರನ್ನು ಶೃಂಗ್ಯಾಯ್ ಬೆಟ್ಟಕ್ಕೆ ಕಳುಹಿಸಿ. ಆ ಹೂಗಿಡವನ್ನು ತರುವ ಏರ್ಪಾಟು ಮಾಡು. ಅಲ್ಲಿ ಅವರಿಗೆ ಉತ್ತುಂಗನು ಸಹಾಯ ಮಾಡುತ್ತಾನೆ. ಅಲ್ಲಿಗೆ ಹೋಗುವವರನ್ನು ಮೊದಲು ಆ ಯುವಕನನ್ನು ನೋಡಲು ಹೇಳು" ಎಂದನು.

"ಆಜ್ಞೆ ಮಹಾರಾಜಾ" ಎಂದು ಅಲ್ಲಿಂದ ಹೊರಟ ಸೇನಾಧಿಪತಿ, ಸ್ವಲ್ಪ ಸಮಯದಲ್ಲಿ ದೃಢಕಾಯರಾದ ಇಬ್ಬರು ಸೈನಿಕರನ್ನು ಕರೆದುಕೊಂಡು ಬಂದನು. ಅವರಿಗೆ ಆತನು ಯುವರಾಣಿಯ ಭವನದಲ್ಲಿರುವ ಹೂಗಳನ್ನು ತೋರಿಸಿ ರಾಜನ ಕೋರಿಕೆಯನ್ನು ತಿಳಿಸಿದನು.

ಆ ಹೂಗಳನ್ನು ನೋಡಿ ಸೈನಿಕರು ಕೂಡಾ ಎಷ್ಟೋ ಸಂತೋಷಿಸಿದರು. "ಈ ಹೂಗಳು ತುಂಬ ಅಂದವಾಗಿವೆ. ಇವನ್ನು ಗುರುತಿಸುವುದು ಬಹು ಸುಲಭ" ಎಂದು ಅವರು ಸೇನಾಧಿಪತಿಯೊಂದಿಗೆ ಹೇಳಿ, ಯುವರಾಣಿಯ ಕಡೆ ತಿರುಗಿ "ನೀವು ಕೋರಿದ ಈ ಹೂ ಗಿಡದೊಂದಿಗೆ ತಿರುಗಿ ಬರುತ್ತೇವೆ. ನಮಗೆ ಆಜ್ಞೆ ಕೊಡಿ ಯುವರಾಣಿ" ಎಂದು ನಮಸ್ಕರಿಸಿ, ಅಲ್ಲಿಂದ ಹೊರಟು ಹೋದರು.

ಸೈನಿಕರು ಶೃಂಗ್ಯಾಯ್ ಬೆಟ್ಟಗಳಿಗೆ ಹೋಗಿ ಒಂದು ವಾರ ಕಳೆದು ಹೋಯ್ತು. ಆದರೆ ಅವರ ಸುದ್ದಿ ಇಲ್ಲ. ಅವರು ಏಕೆ ಇನ್ನೂ ತಿರುಗಿ ಬರಲಿಲ್ಲವೆಂದು ಯುವರಾಣಿ ಆಲೋಚಿಸಿದಷ್ಟು ಅವಳಲ್ಲಿ ತಾಳ್ಮೆ ನಶಿಸಲು ಆರಂಭಿಸಿತು. ಆದರೆ ಉತ್ತುಂಗನು ಕೊಟ್ಟ ಹೂಗಳು ಹತ್ತು ದಿನಗಳಾದರೂ ಬಾಡದೆ ಅಂದೇ ಅರಳಿದಂತೆ ಇದ್ದವು. ಯುವರಾಣಿಗೆ ಇದು ತುಸು ಉಪಶಮನ ಕೊಟ್ಟಿತು. ತುಂಬು ಭರವಸೆ ನೀಡಿ ಹೋದ ಸೈನಿಕರು ಗಿಡದೊಂದಿಗೆ ಮರಳಿ ಬರುವರೆಂಬ ನಂಬಿಕೆಯಿಂದ

ಅವರ ಬರುವಿಕೆಯನ್ನು ನಿರೀಕ್ಷಿಸುತ್ತಾ ದಿನ ಕಳೆದಳು ಪ್ರಿಯಂವದ.

ಹೀಗೆ ಮೂರು ವಾರಗಳು ಕಳೆದ ಮೇಲೆ, ಹೂ ಗಿಡಕ್ಕಾಗಿ ಹೋಗಿದ್ದ ಇಬ್ಬರು ಸೈನಿಕರು, ಮತ್ತಷ್ಟು ಹೂಗಳೊಂದಿಗೆ ರಾಜಧಾನಿಗೆ ತಿರುಗಿ ಬಂದರು. ಸೇನಾಧಿಪತಿ ಗಂಭೀರಸಿಂಹನು ಅವರಿಬ್ಬರನ್ನೂ ಕರೆದುಕೊಂಡು ಅರಮನೆಗೆ ಬಂದನು. ಅಲ್ಲಿ ಅರಸ, ಯುವರಾಣಿ ಅವರ ಬರುವಿಕೆಗಾಗಿ ಎದುರು ನೋಡುತ್ತಿದ್ದರು. ಗಂಭೀರಸಿಂಹನು ಅವರು ತಂದ ಹೂಗಳನ್ನು ಯುವರಾಣಿಗೆ ಕೊಟ್ಟು, ರಾಜನೊಂದಿಗೆ "ಶೃಂಗ್ಯಾಯ್ ಬೆಟ್ಟಗಳಲ್ಲಿ ಇವರಿಗೆ ಪ್ರಸ್ತುತಕ್ಕೆ ಈ ಹೂಗಳು ಮಾತ್ರವೇ ಲಭಿಸಿತಂತೆ. ಗಿಡಗಳು ದೊರೆಯಲಿಲ್ಲವಂತೆ'' ಎಂದನು.

"ಏಕೆ?'' ಎಂಬಂತೆ ರಾಜನು ಸೈನಿಕರತ್ತ ನೋಡಿದ. ಆಗ ಅವನಲ್ಲಿ ಒಬ್ಬ "ಮಹಾಪ್ರಭೂ! ತಮ್ಮ ಆಜ್ಞಾನುಸಾರ ನಾವು ಒಂದು ವಾರ ಪ್ರಯಾಣ ಮಾಡಿ ಅತೀ ಕಷ್ಟದಿಂದ ಶೃಂಗ್ಯಾಯ್ ಬೆಟ್ಟ ತಲುಪಿದೆವು. ಉತ್ತುಂಗನನ್ನು ಸಂಧಿಸಿದೆವು. ಆ ಯುವಕನು ನಮ್ಮನ್ನು ನೋಡಿ ಎಷ್ಟೋ ಸಂತೋಷಿಸಿದ. ನಮ್ಮನ್ನು ಕರೆದುಕೊಂಡು ಅಲ್ಲಿಗೆ ಬಹುದೂರದಲ್ಲಿ ಇರುವ ಬೆಟ್ಟದ ಮೇಲಕ್ಕೆ ಕರೆದುಕೊಂಡು ಹೋದ. ಆ ಬೆಟ್ಟಗಳ ಮಧ್ಯೆ ಚಿಕ್ಕ ಚಿಕ್ಕ ಪೊದರುಗಳಿದ್ದು, ಬೊಂಬಿನಂತಿರುವ ಗಿಡಗಳು ಆಕಾಶವನ್ನು ಮುಟ್ಟುವಂತೆ ಇದ್ದುವು. ಆ ಮರದ ತುಟ್ಟ ತುದಿಯ ಕೊಂಬೆಯಲ್ಲಿ ಮಿಂಚಿನಂತೆ ಹೊಳೆಯುತ್ತಾ ಈ ಹೂಗಳು ಕಂಡವು. ಅಲ್ಲಿಯವರು ಅದನ್ನು ಮಿಂಚಿನ ಹೂಗಳೆಂದು, ನೂರು ವರ್ಷಗಳಿಗೆ ಒಮ್ಮೆ ಅರಳುವುದರಿಂದ "ಶತಾಬ್ದಿಕ'' ಎಂದು ಕರೆಯುತ್ತಾರಂತೆ. ಅವರು ಕೂಡ ಇದನ್ನು ಮೊಟ್ಟ ಮೊದಲ ಬಾರಿಗೆ ನೋಡಿದರಂತೆ. ಹೂ ಬಿಟ್ಟ



ಎರಡು ವರ್ಷದ ನಂತರ ಇದರ ಸಸಿಗಳು, ಅಲ್ಲಲ್ಲಿ, ಗುಂಪುಗುಂಪಾಗಿ ಹುಟ್ಟುತ್ತದೆ ಎಂದೂ, ಅವು ಬೆಳೆದು ದೊಡ್ಡದಾಗಿ ಹೂ ಬಿಡಲು ನೂರು ವರ್ಷ ಆಗುವುದೆಂದೂ ಅಲ್ಲಿರುವ ಹಿರಿಯರು ಹೇಳಿದರು. ಯುವರಾಣಿಗೆ ಆಶಾಭಂಗ ಮಾಡಬಾರದೆಂದು ಒಂದು ಮರವನ್ನು ಕಡಿಸಿ ಅದರ ಹೂ ತಂದಿದ್ದೇವೆ ಪ್ರಭೂ'' ಎಂದನು.

ಸೈನಿಕನ ಮಾತನ್ನು ಶ್ರದ್ಧೆಯಿಂದ ಕೇಳಿದ ರಾಜ "ತುಂಬ ವಿಚಿತ್ರವಾಗಿದೆ. ಸರಿ ಮತ್ತೆರಡು ವರ್ಷಗಳಲ್ಲಿ ಅದರ ಸಸಿ ಬೆಳೆಯುವಾಗ ಅದನ್ನು ತಂದು ಉದ್ಯಾನವನದಲ್ಲಿ ನೆಡಿಸೋಣ'' ಎಂದನು.

"ಆ ಗಿಡದಲ್ಲಿ ಹೂ ಬಿಡಲು ಇನ್ನೂ ನೂರು ವರ್ಷ ಆಗುವುದೇ! ಹಾಗಾದರೆ ಆ ಗಿಡದಲ್ಲಿ ಹೂ ನೋಡುವ ಅದೃಷ್ಟ ನನಗೆ ಇಲ್ಲವೆಂದಾಯ್ತು'' ಎಂದಳು ಯುವರಾಣಿ ನಿರಾಶೆಯಿಂದ.

ರಾಜ ಸೈನಿಕರೊಂದಿಗೆ "ಇಷ್ಟು ಶ್ರಮವಹಿಸಿ ಆ ಹೂ ತಂದಿದ್ದಕ್ಕಾಗಿ ನಿಮಗೆ ಧನ್ಯವಾದಗಳು" ಎಂದು ಹೇಳಿ ಸೇನಾಧಿಪತಿಯ ಕಡೆಗೆ ತಿರುಗಿ "ಇವನನ್ನು ಉಚಿತರೀತಿಯಿಂದ ಸತ್ಕರಿಸಿ ಕಳುಹಿಸು" ಎಂದನು.

"ಆಜ್ಞೆ ಮಹಾರಾಜಾ" ಎಂದು ಸೇನಾಧಿಪತಿ ಅಲ್ಲಿಂದ ಹೊರಟ. ಸೈನಿಕರು ಅತನನ್ನು ಹಿಂಬಾಲಿಸಿದರು.

ಸೈನಿಕರು ಶೃಂಗ್ಮಾಯ್ ಬೆಟ್ಟಗಳಿಗೆ ಹೋಗಿ ಅಲ್ಲಿಯ ಶತಾಬ್ದಿಕೆಯ ಬಗ್ಗೆ ಶೇಖರಿಸಿದ ವಿಷಯಗಳು, ಪ್ರಜೆಗಳ ಮಧ್ಯೆ ಹರಡಿತು. ಅದು ಅವರಿವರ ಬಾಯಿಯಿಂದ ಹೊರಬಂದು, ವಯೋವೃದ್ಧನಾದ ರಾಜಗುರು ಗೌರಿನಾಥನ ಕಿವಿಗಳಿಗೆ ಬಿತ್ತು. ಶತಾಬ್ದಿಕ ಎಂಬ ಮಾತು ಕೇಳಿದೊಡನೆ ಆತ ಬೆಚ್ಚಿ ಬಿದ್ದ. ರಾಜಗುರು ವಿದ್ಯಾಧಿಕನು. ರಾಜಕುಟುಂಬದ ಯೋಗಕ್ಷೇಮಗಳ ಬಗ್ಗೆ ಬಹಳ ಆಸಕ್ತಿ ಉಳ್ಳವನು. ತಕ್ಷಣವೇ ತನ್ನಲ್ಲಿದ್ದ ತಾಳಪತ್ರ ಗ್ರಂಥಗಳನ್ನು ತಿರುಗಿಸಿ ನೋಡಿದ. ಒಂದು ನಿರ್ಣಯಕ್ಕೆ ಬಂದು, ತಾನು ಬರುತ್ತಿರುವುದಾಗಿ ರಾಜನಿಗೆ ಒಬ್ಬ ಭಟನ ಮೂಲಕ ಸುದ್ದಿ ಕಳುಹಿಸಿದ.

ರಾಜಗುರು ಬರುತ್ತಿರುವ ವಾರ್ತೆಯನ್ನು ಕೇಳಿ, ರಾಜನು ಈ ಅರ್ಧರಾತ್ರಿಯಲ್ಲಿ ಅವರು ಬರಲು ಕಾರಣ ಏನಾಗಿರಬಹುದೆಂದು ಆಲೋಚಿಸುತ್ತಾ ಅವರ ಆಗಮನಕ್ಕಾಗಿ ಎದುರು ನೋಡಿದ. ರಾಜಗುರು ಅರಮನೆಯಲ್ಲಿ ಅಡಿ ಇಟ್ಟೊಡನೆ ರಾಜನು ಎದುರಿಗೆ ಹೋಗಿ ಅವರಿಗೆ ಪಾದಾಭಿವಂದನೆ ಮಾಡಿ ಗೌರವದಿಂದ ಒಳಕ್ಕೆ ಕರೆದುಕೊಂಡು ಹೋದನು. ಆತ ಉಚಿತಾಸನದಲ್ಲಿ ಕುಳಿತ ನಂತರ ರಾಜ "ಗುರುದೇವಾ! ತಮ್ಮ ಆಗಮನಕ್ಕೆ ಕಾರಣ?" ಎನ್ನಲು "ಮುಖ್ಯವಾದದ್ದೇ ಮಹಾರಾಜ" ಎಂದ ರಾಜಗುರು.

ಏನು ಎಂಬಂತೆ ನೋಡಿದ ಅರಸ.

"ಶತಾಬ್ದಿಕೆ' ಬಗ್ಗೆ ಕೇಳಿದೆ. ಆ ಹೂವು ಅರಳುವುದು ರಾಜ ಕುಟುಂಬಕ್ಕೆ ರಾಜ್ಯಕ್ಕೆ ಅಶುಭವನ್ನು ಸೂಚಿಸುತ್ತೆ ಮಹಾರಾಜ" ಎಂದ ರಾಜಗುರು.

"ಅಶುಭವನ್ನು ಸೂಚಿಸುವುದೇ" ಎಂದ ರಾಜ ಆಶ್ಚರ್ಯದಿಂದ. ಅವನ ಕಿವಿಗಳನ್ನು ಅವನೇ ನಂಬದವನಂತೆ.

—ಇನ್ನೂ ಇದೆ.





# ವಿಚಿತ್ರ ಪುಷ್ಪ

೨

[ಮಾಣಿಕ್ಯಪುರಿಯಲ್ಲಿ ನಡೆದ ವಸಂತೋತ್ಸವ ಸಂದರ್ಭದಲ್ಲಿ ಏರ್ಪಾಟು ಮಾಡಿದ ಸ್ಪರ್ಧೆಗಳಲ್ಲಿ ಪಾಲ್ಗೊಂಡ ಉತ್ತುಂಗನೆಂಬ ಬೆಟ್ಟದ ಜಾತಿ ಯುವಕನು ಯುವರಾಣಿ ಪ್ರಿಯಂವದೆಗೆ ಒಂದು ಪುಷ್ಪಗುಚ್ಛವನ್ನು ಕಾಣಿಕೆಯಾಗಿ ನೀಡಿದ. ಯುವರಾಣಿ ಆಶಿಸಿದಂತೆ ರಾಜಾ ಪ್ರತಾಪವರ್ಮ ಆ ಅಂದವಾದ ಹೂ ಬಿಡುವ ಗಿಡವನ್ನು ತೆಗೆದುಕೊಂಡು ಬರಲು ಭಟರನ್ನು ಕಳುಹಿಸಿದ. ಅವರು ಹೂಗಳನ್ನು ಮಾತ್ರ ತೆಗೆದುಕೊಂಡು ಬಂದರು. ರಾಜಗುರುವು ಆ ಹೂಗಳು ಅಶುಭ ಸೂಚನೆ ಎಂದು ರಾಜನ ಹತ್ತಿರ ಹೇಳಿದ.... ಆಮೇಲೆ]

ರಾಜಗುರುವಿನ ಮಾತಿನಿಂದ ಅರಸನ ಮನ ಅಳುಕಿತು. ಹೂಗಳ ಬಗ್ಗೆ ಇವರಿಗೆ ಹೇಗೆ ತಿಳಿಯಿತು? ಒಂದು ವೇಳೆ ಯಾರೋ ಹೇಳಿದ ದಂತ ಕಥೆಯನ್ನು ನಂಬಿ ತನಗೆ ಸಲಹೆ ಕೊಡಲು ಬಂದಿರುವರೇ? ಇರಲಾರದು! ರಾಜಗುರು ಎಲ್ಲವನ್ನು ತಿಳಿದು, ಕೂಲಂಕಷವಾಗಿ ತುಲನ ಮಾಡಿ ನೋಡಿ ಒಂದು ನಿರ್ಣಯಕ್ಕೆ ಬಂದಿರುತ್ತಾರೆ.

ಈಗ ಇದರ ಬಗ್ಗೆ ಅವರನ್ನು ಪ್ರಶ್ನಿಸುವುದು ಉಚಿತವೇ, ಅನುಚಿತವೇ ಎಂದು ರಾಜ ಪ್ರತಾಪ ವರ್ಮನ ಮನದಲ್ಲಿ ಒಂದು ಚಿಕ್ಕ ಹೋರಾಟವೇ ನಡೆಯಿತು. ಕಡೆಗೆ ಅವನ ವಿವೇಕ ಜಯಿಸಿತು. ರಾಜಗುರು ತಾವಾಗಿ ಹೇಳುವವರೆಗೂ ತಾನು ಪ್ರಶ್ನಿಸಬಾರದೆಂದು ನಿರ್ಧರಿಸಿದನು ಪ್ರತಾಪವರ್ಮ.

ರಾಜಗುರುವನ್ನು ನೋಡುತ್ತಾ "ಅಂಥಾ ಪರಿಮಳಭರಿತ ಅಂದವಾದ ಹೂಗಳು ಅಶುಭ ಸೂಚನೆಯೇ? ಅದು ಅರಳುತ್ತಿರುವುದು ಅಶುಭ ಹೇಗೆ ಆಗುವುದು? ನನಗೆ ಅರ್ಥವಾಗುತ್ತಿಲ್ಲ ಗುರುದೇವಾ" ಎಂದು ಕೇಳಿದ ರಾಜ ಪ್ರತಾಪವರ್ಮ.

"ಆ ವಿಷಯ ಮತ್ತೆ ಹೇಳುತ್ತೇನೆ. ಆ ಪುಷ್ಪಗಳನ್ನು ಇಬ್ಬರು ಸೈನಿಕರು ತೆಗೆದುಕೊಂಡು ಬಂದಿರು



ವುದಾಗಿ ಕೇಳಿದ. ಸೈನಿಕರು ಏಕೆ ಆ ಹೂ ಬಿಡುವ ಈಶಾನ್ಯ ಸರಹದ್ದಿಗೆ ಹೋದರು? ಸರಹದ್ದಿನ ಪ್ರಾಂತ್ಯದಲ್ಲಿ ಏನೂ ಕಲಹಗಳು ಆರಂಭವಾಗಲಿಲ್ಲವಲ್ಲಾ'' ಎಂದು ಕೇಳಿದ ರಾಜಗುರು ಗೌರೀನಾಥ.

"ಇಲ್ಲ ಗುರುದೇವಾ! ತಮ್ಮ ಆಶೀರ್ವಾದದ ಬಲದಿಂದ ದೇಶದಲ್ಲಿ ಪ್ರಜೆಗಳೆಲ್ಲರೂ ಸುಖ ಶಾಂತಿಗಳಿಂದ ಕ್ಷೇಮವಾಗಿ ಇದ್ದಾರೆ'' ಎಂದು ರಾಜನು ಶತಾಬ್ಧಿಕೆಯನ್ನು ಪಡೆದು. ಸೈನಿಕರು ಹೇಳಿದ ವಿಷಯಗಳನ್ನೆಲ್ಲಾ ಸ್ಪಷ್ಟವಾಗಿ ತಿಳಿಸಿದನು. ಎಲ್ಲವನ್ನೂ ಕೇಳಿದ ರಾಜಗುರು "ಈಗ ಆ ಪುಷ್ಪಗಳು ಎಲ್ಲಿ ಇವೆ?'' ಎಂದು ಕೇಳಿದನು.

"ಯುವರಾಣಿಯ ಭವನದಲ್ಲಿ ಇವೆ. ಇಷ್ಟು ದಿನಗಳಾದರೂ ಅವು ಬಾಡದೆ ಇನ್ನೂ ಸುಗಂಧ ಪರಿಮಳವನ್ನು ಬೀರುತ್ತಿವೆ'' ಎಂದ ರಾಜ.

"ಅವುಗಳನ್ನು ತಕ್ಷಣ ಅಲ್ಲಿಂದ ತೊಲಗಿಸಿ. ಅವು ರಾಜಭವನದಲ್ಲಿ ಇದ್ದರೆ ರಾಜ ಕುಟುಂಬಕ್ಕೆ ಅನಿಷ್ಟದಾಯಕ ಎಂದು ಯುವರಾಣಿಗೆ ನಾನು ಹೇಳಿದೆನೆಂದು ತಿಳಿಸಿ'' ಎಂದ ರಾಜಗುರು.

"ನಿಮ್ಮ ಆಜ್ಞೆಯನ್ನು ಶಿರಸಾವಹಿಸುತ್ತೇನೆ ಗುರುದೇವಾ!'' ಎಂದು ರಾಜನು ಒಂದು ಕ್ಷಣ ಮೌನ ವಹಿಸಿ "ಆದರೆ ಆ ಪುಷ್ಪಗಳು ಏಕೆ ಅಶುಭಸೂಚಕ ಎಂದು ತಾವು ಭಾವಿಸುತ್ತಿರುವಿರೋ ತಿಳಿಯಲು ಕುತೂಹಲವಾಗಿದೆ. ಯುವರಾಣಿ ಪ್ರಿಯಂವದೆ ಆ ಹೂಗಳನ್ನು ಪ್ರಾಣ ಸಮಾನವಾಗಿ ಭಾವಿಸುತ್ತಿದ್ದಾಳೆ. ಅದರಿಂದ ಅವುಗಳ ಬಗ್ಗೆ ನಿಜವಾದ ವಿಷಯಗಳನ್ನು ಆಕೆ ಸಹಾ ಕೇಳುವುದು ಶ್ರೇಯಸ್ಕರವೆಂದು ನಾನು ಭಾವಿಸುತ್ತೇನೆ. ಯುವರಾಣಿಯನ್ನು ಕರೆಯಲು ಅನುಮತಿ ಕೊಡುವಿರಾ?'' ಎಂದು ಕೇಳಿದ ರಾಜ.

'ಸರಿ' ಎನ್ನುವಂತೆ ತಲೆದೂಗಿದ ರಾಜಗುರು.

ಯುವರಾಣಿ ಬರುತ್ತಲೇ ರಾಜಗುರುವಿಗೆ ಪಾದಾಭಿವಂದನೆ ಮಾಡಿದಳು. ರಾಜಗುರು ಅವಳನ್ನು ಆಶೀರ್ವದಿಸಿ ಪಕ್ಕದಲ್ಲಿದ್ದ ಆಸನವನ್ನು ತೋರಿಸಿ ಕುಳಿತುಕೊಳ್ಳುವಂತೆ ಹೇಳಿದನು.

ಅವಳು ಕುಳಿತುಕೊಂಡ ನಂತರ, ತನ್ನನ್ನು ಏಕೆ ಕರೆದಿರಿ? ಕಾರಣವೇನು– ಎಂಬಂತೆ ತಂದೆಯತ್ತ ನೋಡಿದಳು.

"ಶತಾಬ್ಧಿಕಾ– ಎಂಬ ಆ ವಿಚಿತ್ರ ಪುಷ್ಪಗಳ ಬಗ್ಗೆ ಕೆಲವು ಮುಖ್ಯವಾದ ವಿಷಯಗಳನ್ನು ತಿಳಿಯಪಡಿಸಲು ರಾಜಗುರುಗಳು ಬಂದಿದ್ದಾರೆ. ಅವರು ತಿಳಿಸುವ ವಿಷಯಗಳನ್ನು ನೀನೂ ಅರಿಯುವುದು ಒಳ್ಳೆಯದು. ಅದಕ್ಕೆ ನಿನ್ನನ್ನು ಬರಹೇಳಿದೆ'' ಎಂದು ರಾಜನು ಮಗಳೊಂದಿಗೆ.

"ಹೌದೇ!'' ಎಂಬಂತೆ ಅವಳು ರಾಜಗುರುವನ್ನು ನೋಡಿದಳು. ರಾಜಗುರು ತುಸು ಸಮಯ

ಮೌನವಾಗಿ ಆಲೋಚಿಸಿ, ಅನಂತರ ಹೀಗೆ ಹೇಳಲು ಆರಂಭಿಸಿದ.

"ಒಂದಾನೊಂದು ಕಾಲದಲ್ಲಿ ವಿಚಿತ್ರ ಪರಿಮಳ ಸೂಸುವ ಈ ವಿಶಿಷ್ಟ ಹೂಗಳು, ಎಲ್ಲಾ ಪುಷ್ಪಗಳಂತೆ, ವರ್ಷಕ್ಕೆ ಒಮ್ಮೆ ಅರಳುತ್ತಿತ್ತು. ಒಂದು ಬಾರಿ ಅರಳಿದರೆ ಎಷ್ಟು ದಿನಗಳು ಕಳೆದರೂ ಬಾಡದೇ ಇರುತ್ತಿತ್ತು. ನೂರಾರು ವರ್ಷಗಳ ಹಿಂದೆ ನಿಮ್ಮ ವಂಶಕ್ಕೆ ಸೇರಿದ, ಚಂದ್ರಕಾಂತ ವರ್ಮನೆಂಬ ರಾಜನು ಮಾಣಿಕ್ಯಪುರಿಯನ್ನು ಆಳುತ್ತಿದ್ದ. ಆತ ಧರ್ಮಪ್ರಭುವೆಂದು, ಸಾಹಸವೀರನೆಂದು ಪ್ರಖ್ಯಾತಿ ಗಳಿಸಿದ್ದ. ಆತನಿಗೆ 'ಚಂದ್ರಕೇತು' ಎಂಬ ಒಬ್ಬ ಸಹೋದರನಿದ್ದ. ಅವನು ಎಲ್ಲಾ ವಿಧದಲ್ಲಿಯೂ ಅಣ್ಣನಿಗೆ ಸಹಾಯಕಾರಿಯಾಗಿರದೆ ಅಪಾಯಕಾರಿಯಾಗಿದ್ದ. ಅಲೆಮಾರಿಯಾಗಿ ಊರೂರು ಅಲೆಯುತ್ತಾ, ಕಡೆಗೆ, ರಾಜ್ಯದ ಉತ್ತರ ಸರಹದ್ದಿನಲ್ಲಿರುವ ಬೆಟ್ಟದ ಪ್ರಾಂತ್ಯಕ್ಕೆ ಬಂದು ಸೇರಿದ.

ಅಲ್ಲಿ ಅವನು ಬೆಟ್ಟದ ಜಾತಿಯ ಪ್ರಜೆಗಳನ್ನು ಪರಿಚಯ ಮಾಡಿಕೊಂಡನು. ಅವರಲ್ಲಿ "ನಾಗಾಂಭಿ" ಎಂಬ ಒಬ್ಬನಿಗೆ ಮಂತ್ರ, ತಂತ್ರಗಳು ಗೊತ್ತು. ಅವನೊಂದಿಗೆ ಸ್ನೇಹ ಮಾಡಿ ಮಂತ್ರ, ತಂತ್ರ, ವಿದ್ಯೆಗಳನ್ನು ಕಲಿತುಕೊಂಡ.

ಒಂದು ದಿನ ಆ ಬೆಟ್ಟದ ಮಂತ್ರಗಾರ ವಿಚಿತ್ರವಾದ ಕೆಲವು ಹೂಗಳನ್ನು ತಂದು, ಸಳಸಳನೆ ಕುದಿಯುತ್ತಿರುವ ನೀರಿನಲ್ಲಿ ಹಾಕುವುದನ್ನು ನೋಡಿದ. ಬೆಟ್ಟದ ಮಂತ್ರಗಾರ ಆ ನೀರನ್ನು ಪ್ರತಿದಿನಾ ಮತ್ತೆ, ಮತ್ತೆ ಕುದಿಸಿ ಒಂದು ವಿಧವಾದ ಸುವಾಸನೆಯ ತೈಲವನ್ನು ತಯಾರಿಸಿದ. ಆ ತೈಲವನ್ನು ಯಾರ ಮೇಲಾದರೂ ಚೆಲ್ಲಿದರೆ ಅವರು ತಮ್ಮ ವಶರಾಗಿ, ತಾವು ಹೇಳಿದಂತೆ ನಡೆದುಕೊಳ್ಳುತ್ತಾರೆಂದು ಬೆಟ್ಟದ ಮಂತ್ರಗಾರ ಚಂದ್ರಕೇತುವಿಗೆ



ಹೇಳಿದ. ಚಂದ್ರಕೇತು ಅಮಿತೋತ್ಸಾಹದಿಂದ ಆ ಹೂಗಳನ್ನು ತೆಗೆದುಕೊಂಡು ಮಾಣಿಕ್ಯಪುರಿ ಸೇರಿ, ಒಂದು ರಹಸ್ಯ ಪ್ರದೇಶದಲ್ಲಿ ಬೆಟ್ಟದ ಮಂತ್ರಗಾರನು ಮಾಡಿದಂತೆ, ಆ ಹೂಗಳನ್ನು ನೀರಿನಲ್ಲಿ ಹಾಕಿ ಕುದಿಸಿ, ಕುದಿಸಿ ಕೆಲವು ದಿನಗಳಲ್ಲಿ ವಶೀಕರಣ ತೈಲವನ್ನು ತಯಾರು ಮಾಡಿದ.

ಆ ತೈಲವನ್ನು ಸಾಧಾರಣ ಒಬ್ಬ ವ್ಯಕ್ತಿಯ ಮೇಲೆ ಚೆಲ್ಲಿ ಅವನ ನಡತೆಯನ್ನು ಪರೀಕ್ಷಿಸಿ, ನಂತರ ರಾಜನ ಮೇಲೆ ಪ್ರಯೋಗಿಸಿ, ಆತನನ್ನು ತನ್ನ ಕಾಲ ಕಸವನ್ನಾಗಿ ಮಾಡಿಕೊಂಡು, ತಾನು ರಾಜ್ಯವನ್ನು ಆಳಬೇಕೆಂಬ ಯೋಚನೆಯನ್ನು ಸಿದ್ಧ ಮಾಡಿಕೊಂಡ.

ಇದುವರೆಗೂ ಹೇಳುತ್ತಿದ್ದ ರಾಜಗುರುವನ್ನು ತಡೆದು ಯುವರಾಣಿ – "ಅವನ ಯೋಚನೆ ನೆರವೇರಲಿಲ್ಲ, ಅಲ್ಲವೇ?'' ಎಂದು ಪ್ರಶ್ನಿಸಿದಾಗ,



ಅವರು ತುಸು ಸಮಯ ಸುಮ್ಮನಿದ್ದು ಅನಂತರ "ಇಲ್ಲ ಯುವರಾಣೀ! ಅವನ ಕುತಂತ್ರ ನೆರವೇರಲಿಲ್ಲ. ಆ ವಿಷಯವನ್ನೇ ಹೇಳುತ್ತೇನೆ. ಶ್ರದ್ಧೆಯಿಂದ ಕೇಳು'' ಎಂದು ರಾಜಗುರು ಮತ್ತೆ ಹೇಳಲು ಆರಂಭಿಸಿದನು.

"ಆ ಸಮಯದಲ್ಲಿ ಕುಲಶ್ರೇಷ್ಠನೆಂಬ ಒಬ್ಬ ಪಂಡಿತನು ಭೈರಂಬಿ ಮಾತೆಯ ದೇವಸ್ಥಾನದ ಪ್ರಧಾನ ಪೂಜಾರಿಯಾಗಿದ್ದನು. ಆತನಿಗೆ ಅತಿ ಸೌಂದರ್ಯವತಿಯಾದ ಮಗಳಿದ್ದಳು. ಅವಳ ಹೆಸರು ಭಾಗ್ಯಶ್ರೀ. ಅವಳನ್ನು ನೋಡುತ್ತಲೇ ಅವಳ ರೂಪಕ್ಕೆ ಮರುಳಾದ ಚಂದ್ರಕೇತು, ಅವಳು ಪೂಜಾರಿಯ ಮಗಳೆಂದು ತಿಳಿಯದೆ, ತನ್ನ ಮೋಹನದ ತೈಲವನ್ನು ಪ್ರಯೋಗಿಸಿ ಅವಳನ್ನು ವಶ ಮಾಡಿಕೊಳ್ಳಬೇಕೆಂದು ಆಶಿಸಿದ.

ಒಂದು ದಿನ ಭಾಗ್ಯಶ್ರೀ ತನ್ನ ಸಖಿಯರೊಂದಿಗೆ ಕೂಡಿ, ಹತ್ತಿರದಲ್ಲಿರುವ ನದಿಯಲ್ಲಿ ಸ್ನಾನ ಮಾಡಿ, ದೇವಾಲಯಕ್ಕೆ ಬರುವುದನ್ನು ನೋಡಿದ ಚಂದ್ರಕೇತು ಒಂದು ಮರದ ಹಿಂದೆ ಬಚ್ಚಿಟ್ಟುಕೊಂಡು, ಅವಳ ಮೇಲೆ ತಾನು ತಯಾರಿಸಿದ ತೈಲವನ್ನು ಚೆಲ್ಲಿದ. ಮರುಕ್ಷಣವೇ ಭಾಗ್ಯಶ್ರೀ ದಿಕ್ಕುಗಳು ಪ್ರತಿಧ್ವನಿಸುವಂತೆ ಚೀರುತ್ತಾ, ಅತ್ತ ಇತ್ತ ಓಡಲು ಆರಂಭಿಸಿದಳು. ಅವಳ ಹಿಂದೆ ಬಂದಿದ್ದ ಸಖಿಯರಿಗೆ ಒಡತಿಗೆ ಏನಾಯ್ತು ಎಂದು ತಿಳಿಯದೆ ಅವಳನ್ನು ಹಿಡಿಯಲು ಪ್ರಯತ್ನಿಸಿದರು. ಪೂಜಾರಿಗೆ ತಿಳಿಸಲು ಕೆಲವರು ಗುಡಿಯ ಒಳಗೆ ಓಡಿದರು. ಮತ್ತೆ ಕೆಲವರು, ಮರದ ಹಿಂದಿನಿಂದ ಕೈಯಲ್ಲಿ ಪಾತ್ರೆ, ಎಲೆಗಳೊಂದಿಗೆ ಓಡುತ್ತಿರುವ ಚಂದ್ರಕೇತುವನ್ನು ಹಿಡಿಯುವಂತೆ ಕೂಗಿದರು. ದಾರಿಯಲ್ಲಿ ನಡೆದು ಹೋಗುತ್ತಿದ್ದ ಕೆಲವರು ಚಂದ್ರಕೇತುವನ್ನು ಹಿಡಿದು, ಗುಡಿಯ ಕಡೆ ಎಳೆದುಕೊಂಡು ಬಂದರು.

ಪೂಜಾ ಸಮಯ ಸಮೀಪಿಸಿದ ಕಾರಣ ದೇವಿಯ ವಿಗ್ರಹಕ್ಕೆ ಅಲಂಕಾರ ಮಾಡುವುದರಲ್ಲಿ ಮಗ್ನನಾಗಿದ್ದ ಪೂಜಾರಿ ಕುಲಶ್ರೇಷ್ಠನು, ಸ್ತ್ರೀಯರ ಆರ್ತನಾದ ಕೇಳಿ ಹೊರಗೆ ಬಂದು ಅಲ್ಲಿಯ ದೃಶ್ಯ ನೋಡಿ ದಿಗ್ಭ್ರಾಂತನಾದ. ಆತ ಮಗಳನ್ನು ಸಮೀಪಿಸಿ ಅವಳ ಭುಜಗಳನ್ನು ಹಿಡಿದು "ಭಾಗ್ಯಶ್ರೀ! ಏನಾಯ್ತು ತಾಯೀ'' ಎಂದು ಕೇಳಿದ.

ಭಾಗ್ಯಶ್ರೀಯ ಬಾಯಿಂದ ಮಾತು ಹೊರಗೆ ಬರಲಿಲ್ಲ. ಅವಳು ಸ್ವಲ್ಪ ಸಮಯ ಅತ್ತ ಇತ್ತ ನೋಡಿ ಸೊರಗಿ ಜ್ಞಾನತಪ್ಪಿ ಕೆಳಗೆ ಬಿದ್ದಳು. ಅವಳನ್ನು ಹಿಡಿದಿದ್ದ ಸಖಿಯರು "ನದಿಗೆ ಹೋಗಿ ಬರುತ್ತಿದ್ದ ಭಾಗ್ಯಶ್ರೀಯ ಮೇಲೆ ಆ ಮನುಷ್ಯ ಯಾವುದನ್ನೋ ಚೆಲ್ಲಿದ. ಆ ಕ್ಷಣದಿಂದ ಭಾಗ್ಯಶ್ರೀ, ಉನ್ಮಾದಿನಿಯಂತೆ ಪ್ರವರ್ತಿಸುತ್ತಿದ್ದಾಳೆ'' ಎಂದು ಜನರ ಮಧ್ಯೆ ನಿಂತಿದ್ದ ಚಂದ್ರಕೇತುವನ್ನು ಪೂಜಾರಿಗೆ

ತೋರಿಸಿದರು.

ಪೂಜಾರಿ ಅವನ ಕಡೆ ನಾಲ್ಕಡಿ ಇಟ್ಟು "ಯಾರು ನೀನು? ನನ್ನ ಮಗಳನ್ನು ಏನು ಮಾಡಿದೆ?'' ಎಂದು ಕೋಪವಾಗಿ ಪ್ರಶ್ನಿಸಿದ.

"ಮಹಾತ್ಮಾ! ಆಕೆ ನಿಮ್ಮ ಮಗಳೆಂದು ತಿಳಿಯದೆ ಈ ಅಪರಾಧ ನಡೆದುಹೋಯ್ತು. ಬೆಟ್ಟದ ಜಾತಿಯವನು ಹೇಳಿದಂತೆ, ಕೆಲವು ವಿಚಿತ್ರ ಹೂಗಳನ್ನು ಶೇಖರಿಸಿ ವಶೀಕರಣ ತೈಲ ತಯಾರು ಮಾಡಿದೆ. ಆ ತೈಲದ ಪ್ರಭಾವವನ್ನು ಶೋಧಿಸಿ ನೋಡಲು, ಅದನ್ನು ತಮ್ಮ ಕುಮಾರಿ ಎಂದು ತಿಳಿಯದೆ, ಆ ಯುವತಿಯ ಮೇಲೆ ಚೆಲ್ಲಿದೆ ಅಷ್ಟೇ! ಮತ್ತೆ ಯಾವ ಪಾಪವೂ ನಾನರಿಯೆ.... ನನ್ನನ್ನು...'' ಎಂದು ಇನ್ನು ಏನನ್ನೋ ಹೇಳಲು ಪ್ರಯತ್ನಿಸಿದ ಚಂದ್ರಕೇತು.

ಆದರೆ ಪೂಜಾರಿ ಆ ಮಾತುಗಳನ್ನು ಕಿವಿಯಲ್ಲಿ ಹಾಕಿಕೊಳ್ಳದೇ ಸರಸರನೆ ದೇವಸ್ಥಾನದ ಒಳಗೆ ಹೋದ. ದೇವಿಯ ಕೊರಳಲ್ಲಿ ಇದ್ದ ಪುಷ್ಪಹಾರವನ್ನು ತೆಗೆದುಕೊಂಡು, ಹೊರಗೆ ಬಂದು, "ಮಾತಾ! ಲೈರಂಭೀ! ನೀನೇ ನನಗೆ ದಿಕ್ಕು ಎಂದು ಭಾವಿಸಿ, ಲೋಕ ಕ್ಷೇಮಕ್ಕಾಗಿ ನಿನ್ನನ್ನು ಪೂಜೆ ಮಾಡುತ್ತಿರುವ ನಾನು ಇದುವರೆಗೂ ನನಗಾಗಿ ನಿನ್ನನ್ನು ಏನೂ ಕೇಳಲಿಲ್ಲ. ಇಂದು, ನಾನು ಬಯಸಿ, ಬಯಸಿ ಪಡೆದ ನನ್ನ ಒಬ್ಬಳೇ ಮಗಳಿಗೆ ಆದ ಗತಿಯನ್ನು ನೋಡು! ಅವಳನ್ನು ರಕ್ಷಿಸುವ ಭಾರ ನಿನ್ನದು. ನನ್ನ ಮಗಳನ್ನು ಇಂಥಾ ಸ್ಥಿತಿಗೆ ತಂದಿರುವ ಆ ನರರೂಪ ರಾಕ್ಷಸನು ನಾಶವಾಗಿ ಹೋಗಲಿ!! ನಿನ್ನ ಭಕ್ತನ ಮಗಳಿಗೆ ಘಾಸಿಯಾದ ಕಷ್ಟಕೊಟ್ಟ ಆ ಹೂವು ಮತ್ತೆ ಅರಳದೇ ಹೋಗಲಿ" ಎಂದು ಶಪಿಸುತ್ತಾ, ಕೈಯಲ್ಲಿ ಇದ್ದ ಪುಷ್ಪಹಾರವನ್ನು ಕಿತ್ತು ಅತ್ಯಂತ ಆಗ್ರಹ, ಆವೇಶಗಳಿಂದ ಚಂದ್ರಕೇತುವಿನ ಮೇಲೆ ಬೀಸಿ ಎಸೆದನು.

ಮರುಕ್ಷಣವೇ ಪೂಜಾರಿಯ ಎದುರಿನಲ್ಲಿ ಬಂದು





ವಿಚಿತ್ರವಾದ ಬೆಳಕು ಪ್ರಜ್ವಲಿಸಿತು. ಆ ಬೆಳಕಿನ ನಡುವೆ ಲೈರಂಬಿ ಮಾತೆ ಪ್ರತ್ಯಕ್ಷಳಾಗಿ ಮಂದಹಾಸ ಬೀರುತ್ತಾ "ಮಗೂ! ನಿನ್ನ ಪ್ರಾರ್ಥನೆಯನ್ನು ಕೇಳಿದೆ. ನಿನ್ನ ಮಗಳಿಗೆ ಯಾವ ಹಾನಿಯೂ ಆಗದು. ಅವಳು ಅತಿ ಶೀಘ್ರದಲ್ಲಿ ಎಂದಿನಂತೆ ಆಗುತ್ತಾಳೆ. ನಿನ್ನ ಮಗಳಿಗೆ ಹಾನಿ ಮಾಡಿದವನನ್ನು ನೀನು, ನಿನ್ನ ಬಾಯಿಯಿಂದ ನರರೂಪ ರಾಕ್ಷಸ ಎಂದು ಹೇಳಿದೆ. ಅವನು ನಿಜವಾಗಿಯೂ ಭೂತವಾಗಿ ಬದಲಾಗುತ್ತಾನೆ. ಅವನಿಗೆ ಈ ಭೂಮಿಯ ಮೇಲೆ ಸ್ಥಾನ ಇರುವುದಿಲ್ಲ. ಹೂವಿನಲ್ಲಿ ಯಾವ ದೋಷವೂ ಇಲ್ಲದಿದ್ದರೂ ಅದು ಆ ದುರ್ಮಾರ್ಗದ ಕೃತ್ಯಕ್ಕೆ ಉಪಯೋಗವಾಗಿದೆ. ಅದರಿಂದ ನಿನ್ನ ಇಷ್ಟದಂತೆ ಆ ಹೂವು ಇನ್ನು ಈಗ ಅರಳುವುದಿಲ್ಲ. ಮುಂದೆ ಅರಳಿದರೂ, ಪ್ರಕೃತಿಗೆ ವಿರುದ್ಧವಾಗಿ ನಡೆಯುವವರು, ಅದರ ಮೂಲಕ ಕಷ್ಟಗಳಿಗೆ ಗುರಿಯಾಗುತ್ತಾರೆ... ಸರಿ! ಪ್ರಸ್ತುತಕ್ಕೆ ಎಲ್ಲವನ್ನೂ ಮರೆತುಬಿಡು. ದೇವಾಲಯದ ಒಳಗೆ ಬಾ! ಆರತಿ ಸಮಯ ಮೀರಿ ಹೋಗುತ್ತಿದೆ. ನಿನಗಾಗಿ ಕಾದಿರುವೆನು'' ಎಂದಳು ಪೂಜಾರಿಗೆ ಮಾತ್ರ ಕೇಳುವಂತೆ. ದೇವಿಯ ರೂಪ ಸಹಾ ಪೂಜಾರಿಗೆ ಮಾತ್ರ ಕಂಡಿತು.

ಪೂಜಾರಿ ಸಂತೋಷದಿಂದ ಒಳಗೆ ಹೋಗಿ, ದೇವಿಯ ವಿಗ್ರಹಕ್ಕೆ ಆರತಿ ಬೆಳಗಿ ಪ್ರಶಾಂತ ಹೃದಯದಿಂದ ಹೊರಗೆ ಬಂದ. ಮಗಳು ಕಣ್ಣು ತೆರೆದು ಮುಗುಳ್ನಗೆಯಿಂದ ಆತನ ಪಕ್ಕದಲ್ಲಿ ಬಂದು ನಿಂತಳು. ಅಲ್ಲಿ ನೆರೆದಿದ್ದವರು ಭಾಗ್ಯಶ್ರೀಯ ಮೇಲೆ ತೈಲವನ್ನು ಚೆಲ್ಲಿದವನು ಚಂದ್ರಕೇತನೆಂದೂ, ಅವನು ತಪ್ಪಿಸಿಕೊಂಡು ಓಡಿ ಹೋಗುತ್ತಿರುವಾಗ ವಿಚಿತ್ರ ಭೂತದಂತೆ ಕಂಡನೆಂದೂ ಹೇಳಿದರು.

ವಿಷಯ ತಿಳಿದೊಡನೆ ರಾಜ ಚಂದ್ರಕಾಂತ ವರ್ಮನು ತಮ್ಮನು ಮಾಡಿದ ದುಷ್ಕೃತ್ಯಕ್ಕೆ ನಾಚಿ, ತಲೆ ಬಾಗಿದ.

ಪೂಜಾರಿ ರಾಜನ ಬಳಿಗೆ ಬಂದು, ನಡೆದು ಹೋದ ವಿಷಯಕ್ಕೆ ಕ್ಷಮಾಪಣೆ ಕೇಳಿದ. ರಾಜನು, ಪೂಜಾರಿಯನ್ನು ಸಮಾಧಾನ ಮಾಡುತ್ತಾ "ನಿಮ್ಮ ಮಗಳು ಸುಧಾರಿಸಿಕೊಂಡ ನಂತರ ಆಕೆಯನ್ನು ರಾಜಭವನಕ್ಕೆ ಕಳುಹಿಸಿಕೊಡಿ. ನನ್ನ ಮಗಳೊಂದಿಗೆ ಕಲೆತು ಕಾಲ ಕಳೆದರೆ ಅವಳು ಬೇಗನೇ ಗುಣಮುಖಳಾಗುತ್ತಾಳೆ'' ಎಂದ.

ರಾಜಗುರು ಇಷ್ಟರವರೆಗೂ ಹೇಳಿ "ನಾನು ಈ ವಿಷಯಗಳನ್ನು ಚಂದ್ರಕಾಂತ ಮಹಾರಾಜರ ಘನತೆಯನ್ನು ವಿವರಿಸಿರುವ 'ತಾಳಪತ್ರ ಗ್ರಂಥ' ಗಳಲ್ಲಿ ಓದಿದ್ದೇನೆ. ದೇವಿಯ ಶಾಪಕ್ಕೆ ಗುರಿಯಾದ ಪುಷ್ಪ ನೂರು ವರ್ಷಕ್ಕೆ ಒಮ್ಮೆ ಅರಳುವುದೆಂದು,

ಅದಕ್ಕೆ ಅದನ್ನು 'ಶತಾಬ್ದಿಕ' ಎಂದು ಕರೆಯುವರೆಂದು ಕೇಳಿದ್ದೇನೆ. ಈಗ ಈ ಹೂಗಳನ್ನು ನೋಡುತ್ತಿದ್ದರೆ ಆ ವಿಷಯಗಳು ನೆನಪಿಗೆ ಬಂತು. ಪ್ರಜೆಗಳ ಶಾಂತಿ, ಭದ್ರತೆಗಳನ್ನು ಕಾಪಾಡುವುದು ನೆನಪಿಗೆ ಬಂತು. ಅದಕ್ಕೆ ಆ ವಿಷಯಗಳನ್ನು ನಿಮಗೆ ತಿಳಿಯಪಡಿಸಿ ಎಚ್ಚರಿಸುವುದು ನನ್ನ ಕರ್ತವ್ಯವೆಂದು ಭಾವಿಸಿ ಬಂದಿದ್ದೇನೆ'' ಎಂದು ಹೇಳುವುದನ್ನು ಪೂರ್ತಿ ಮಾಡಿದ.

ರಾಜ ಪ್ರತಾಪವರ್ಮ ಎಲ್ಲವನ್ನೂ ಕೇಳಿ, ದೀರ್ಘವಾಗಿ ಆಲೋಚಿಸಿ, ಮಗಳ ಕಡೆ ತಿರುಗಿ, "ಪ್ರಿಯಂವದಾ! ಆ ಹೂಗಳನ್ನು ರಾಜಭವನದಲ್ಲಿ ಇಡಬಾರದೆಂದು ರಾಜಗುರುಗಳು ಅಪ್ಪಣೆ ಮಾಡಿದ್ದಾರೆ. ಅದರಿಂದ ಅವುಗಳನ್ನು ಉದ್ಯಾನವನಕ್ಕೆ ಕಳುಹಿಸುವುದು ಅತ್ಯವಸರ'' ಎಂದನು.

ಪ್ರಿಯಂವದೆ "ಹಾಗೆಯೇ ಮಾಡೋಣ ಅಪ್ಪಾ! ಈಗಲೇ ಅವುಗಳನ್ನು ತೆಗೆಸುವ ಏರ್ಪಾಡು ಮಾಡುತ್ತೇನೆ'' ಎಂದು ರಾಜನ ಬಳಿ ಹೇಳಿ, ಗುರುಗಳತ್ತ ತಿರುಗಿ, "ಸುಗಂಧಭರಿತ ಪರಿಮಳವನ್ನು ಹರಡುವ ಆ ಹೂಗಳ ಹಿಂದೆ ಇಂಥಾ ವಿಷಾದ ಕಥೆ ಇರುವುದು ದುರದೃಷ್ಟ'' ಎಂದಳು.

ಅಷ್ಟರಲ್ಲಿ ಒಬ್ಬ ಭಟನು ಬಂದು ರಾಜನಿಗೆ ನಮಸ್ಕರಿಸಿ "ಪ್ರಭೂ! ಸೇನಾಧಿಪತಿ ತಮ್ಮ ದರ್ಶನಕ್ಕಾಗಿ ಕಾದಿದ್ದಾರೆ'' ಎಂದು ಹೇಳಿದನು.

"ಬರಹೇಳು'' ಎಂದ ರಾಜ.

ಭಟನು ಹೋದ ಸ್ವಲ್ಪ ಹೊತ್ತಿನಲ್ಲಿ ಸೇನಾಧಿಪತಿ ಬಂದು ರಾಜನಿಗೂ, ರಾಜಗುರುವಿಗೂ ನಮಸ್ಕರಿಸಿದ.

"ಏನು ವಿಷಯ? ನಿನ್ನನ್ನು ನೋಡುತ್ತಿದ್ದರೇ ದೊಡ್ಡ ಸಮಸ್ಯೆಯೊಂದಿಗೆ ಬಂದಿರುವಂತಿದೆ'' ಎಂದು ಕೇಳಿದನು ರಾಜ.



"ನಿಜ ಪ್ರಭೂ! ದೊಡ್ಡ ಸಮಸ್ಯೆ ಎದುರಾಗಿದೆ. ಈ ದಿನ ಬೆಳಗಿನ ಝಾವದಿಂದ ನಮ್ಮ ರಾಜ್ಯದ ದಕ್ಷಿಣ ಸರಹದ್ದಿನಲ್ಲಿರುವ ಪ್ರಜೆಗಳು ಮನೆಗಳನ್ನು ಬಿಟ್ಟು ದಿಕ್ಕಾಪಾಲಾಗಿ ಓಡುತ್ತಿದ್ದಾರೆ. ಕೆಲವರು ರಾಜಧಾನಿಯ ಕಡೆ ಬರುತ್ತಿದ್ದಾರೆ. ಸೂರ್ಯೋದಯವಾದಾಗ, ಸಮುದ್ರ ತೀರದಲ್ಲಿ ಇದ್ದ ಮನೆಗಳು ನೆಲಸಮವಾಗಿವೆ. ಭೂಕಂಪವಾಗಲೀ, ಸಮುದ್ರದ ಅಲೆಗಳು ಬಂದು ಮನೆಗಳನ್ನು ಅಳಿಸಿದಂತೆ ಕಾಣುತ್ತಿಲ್ಲ. ಮೇಲಾಗಿ ಎಲ್ಲಾ ಮನೆಗಳು ಬಿದ್ದು ಹೋದರೂ ಯಾವ ಶಬ್ದವೂ ಬರಲಿಲ್ಲವಂತೆ. ಅದೃಷ್ಟವಶಾತ್ ಜನನಷ್ಟ ಆಗಲಿಲ್ಲ ಎಂದು ವಾರ್ತೆಗಳು ಬರುತ್ತಿವೆ. ಏಕೆ ಹೀಗೆ ನಡೆಯಿತು ಎಂದು ಊಹೆಗೂ ನಿಲುಕದ ವಿಷಯವಾಗಿದೆ'' ಎಂದ ಸೇನಾಧಿಪತಿ ಗಂಭೀರವರ್ಮ.

"ಸರಿ! ಈಗೇನು ಮಾಡಿದೆ'' ಎಂದು ಕೇಳಿದ ರಾಜ.

"ಆಗಲೇ ನಮ್ಮ ಸೈನಿಕರು ಕೆಲವರನ್ನು ಸಮುದ್ರ ತೀರದಲ್ಲಿ ಕಾವಲಿರಲು ಕಳುಹಿಸಿದ್ದೇನೆ. ಅನುಮಾನಾಸ್ಪದವಾಗಿ ಯಾರನ್ನಾದರೂ ಕಂಡರೆ ಬಂಧಿಸಿ, ಕರೆದುಕೊಂಡು ಬರುವಂತೆ ಆಜ್ಞಾಪಿಸಿದ್ದೇನೆ. ಮತ್ತೊಂದು ಸೈನ್ಯದಳವನ್ನು ಕಷ್ಟಗಳಲ್ಲಿ ಇರುವ ಪ್ರಜೆಗಳಿಗೆ ಸಹಾಯ ಮಾಡಲು ಕಳುಹಿಸಿದ್ದೇನೆ. ಮತ್ತೆ ಕೆಲವು ಸೈನಿಕರನ್ನು ನಗರ ದ್ವಾರದ ಹತ್ತಿರ ಕಳುಹಿಸಿ, ಓಡಿ ಬರುತ್ತಿರುವ ಜನರನ್ನು ಸಮಾಧಾನ ಮಾಡಿ ಅವರಿಗಾಗಿ ಏರ್ಪಡಿಸಿರುವ ಪ್ರತ್ಯೇಕ ಶಿಬಿರಗಳಿಗೆ ಕರೆದುಕೊಂಡು ಹೋಗುವಂತೆ ಹೇಳಿದ್ದೇನೆ. ಈ ವಿಷಯಗಳನ್ನು ನಿಮಗೆ ತಿಳಿಸುವುದಕ್ಕಾಗಿ ಬಂದೆ'' ಎಂದ ಸೇನಾಧಿಪತಿ.

"ಮನೆ ಕಳೆದುಕೊಂಡ ಕೆಲವರಿಗೆ ನಮ್ಮ ಅರಮನೆಯಲ್ಲೇ ಆಶ್ರಯ ಕೊಡಬಹುದಲ್ಲಾ! ಮುಖ್ಯವಾಗಿ ಮಹಿಳೆಯರನ್ನು ಮಕ್ಕಳನ್ನು ಇಲ್ಲಿಗೆ ಕಳುಹಿಸಿಕೊಡಿ'' ಎಂದಳು ಯುವರಾಣಿ ಪ್ರಿಯಂವದೆ ಆತುರದಿಂದ.

"ಒಳ್ಳೆಯ ಆಲೋಚನೆ! ನಮ್ಮ ರಾಜಭವನದಲ್ಲಿ ಯಾವ ಭಾಗವನ್ನು ಅವರಿಗೆ ಬಿಟ್ಟು ಕೊಡಬೇಕೆಂದು ನೀನೇ ಯೋಚಿಸಿ ಹೇಳು. ಅಲ್ಲದೆ ಇಲ್ಲಿಗೆ ಬರುವ ಸ್ತ್ರೀಯರಿಗೆ, ಮಕ್ಕಳಿಗೆ ಬೇಕಾಗಿರುವ ಎಲ್ಲವನ್ನೂ ಒದಗಿಸಿಕೊಡುವ ಹೊಣೆಯನ್ನು ನೀನೇ ವಹಿಸಿಕೊಂಡರೆ ಬಹಳ ಉತ್ತಮ'' ಎಂದು ರಾಜನು ಮಗಳಿಗೆ ಹೇಳಿ, ಸೇನಾಧಿಪತಿಯ ಕಡೆ ತಿರುಗಿ "ಬಾಧಿತರಿಗೆ ಯಾವ ಲೋಪವೂ ಇಲ್ಲದಂತೆ ನೋಡಿಕೊಳ್ಳುವುದು ನಿನ್ನ ಪ್ರಥಮ ಕರ್ತವ್ಯ. ಮುಂದೆ ಅವರ ಜೀವನೋಪಾಯಕ್ಕೆ ಏನು ಮಾಡಬೇಕೆಂದು ಅನಂತರ ಆಲೋಚಿಸೋಣ'' ಎಂದು ರಾಜಗುರುವಿನತ್ತ ನೋಡಿ "ತಮ್ಮ ಸಲಹೆ ಏನು ಗುರುದೇವಾ'' ಎಂದು ಕೇಳಿದ.

ರಾಜಗುರುಗಳ ಮನದಲ್ಲಿ ಏಕೋ ಈ ಸಂಭವ ಅಶುಭದಂತೆ ಕಂಡಿತು. ತಾಳಪತ್ರದಲ್ಲಿರುವ ಹಾಗೆ ನಡೆಯಲು ಆರಂಭವಾಗಿದೆ ಎಂದು ಈ ಘಟನೆ ಸೂಚಿಸುತ್ತಿದೆಯೇ?

"ಹಾಗೆಯೇ ಮಾಡು ಮಹಾರಾಜಾ!'' ಎಂದು ರಾಜಗುರು ಸ್ವಲ್ಪ ಸಮಯ ಮೌನವಾಗಿ ಆಲೋಚಿಸಿ "ಸೇನಾಧಿಪತಿ ತಂದಿರುವ ವಾರ್ತೆಯನ್ನು ಕೇಳುತ್ತಿದ್ದರೆ ಶತಾಬ್ಧಿಕೆಯನ್ನು ಕುರಿತು ನಾನು ಅನುಮಾನಿಸಿದ ವಿಷಯಗಳು ನಿಜವಾಗುವುದೇನೋ ಎಂದು ಭಯವಾಗಿದೆ'' ಎಂದನು ವಿಷಾದದಿಂದ.

—(ಇನ್ನೂ ಇದೆ)





# ವಿಚಿತ್ರ ಪುಷ್ಪ

[ರಾಜ ಪ್ರತಾಪವರ್ಮನಿಗೂ, ಯುವರಾಣಿ ಪ್ರಿಯಂವದೆಗೂ, ರಾಜಗುರು ಗೌರೀನಾಥನು ವಿಚಿತ್ರಪುಷ್ಪ ಶತಾಬ್ದಿಕೆಯನ್ನು ಕುರಿತು ವಿಷಯಗಳನ್ನು ತಿಳಿಸಿದನು. ಮಾಣಿಕ್ಯಪುರಿ ದಕ್ಷಿಣ ಪ್ರಾಂತ್ಯದಲ್ಲಿ ಸಮುದ್ರ ತೀರದಲ್ಲಿರುವ ಗ್ರಾಮಗಳು, ಮನೆಗಳು ಹಠಾತ್ತನೆ ನೆಲಸಮವಾಗಿ ಹೋಯಿತೆಂದೂ, ಪ್ರಜೆಗಳು ಭಯಭ್ರಾಂತರಾಗಿ ಓಡಿ ಹೋಗುತ್ತಿದ್ದಾರೆಂದು ಸೇನಾಧಿಪತಿ ಗಂಭೀರಸಿಂಹನು ರಾಜನಿಗೆ ಹೇಳಿದನು.]

ಸಮುದ್ರ ತೀರದಲ್ಲಿರುವ ಗ್ರಾಮಗಳು ನೆಲಸಮವಾಗಿ ಹೋಗಲು ಕಾರಣ ಏನೆಂದು ತಿಳಿಯಲಿಲ್ಲ. ಏನು ನಡೆಯಿತೆಂದು ಯಾರಿಗೂ ಅರ್ಥವಾಗಲಿಲ್ಲ. ಆ ರಾತ್ರಿ ಎಂದಿನಂತೆ ಪ್ರಶಾಂತವಾಗಿ ಕಳೆಯಿತು. ಮಳೆ ಬರುವುದಾಗಲೀ, ಸಮುದ್ರದ ಅಲೆಗಳು ಉಕ್ಕಿ ಬರುವುದಾಗಲೀ ನಡೆಯಲಿಲ್ಲ. ಬೆಳಿಗ್ಗೆ ಎದ್ದು ನೋಡಿದಾಗ ಚಿಕ್ಕ ದೊಡ್ಡ ಮನೆಗಳು ನೆಲಮಟ್ಟವಾಗಿರುವುದನ್ನು ಕಂಡರು. ಏನು ನಡೆಯಿತೋ ಎಂದು ಒಬ್ಬೊಬ್ಬರೂ ಒಂದೊಂದು ಊಹಿಸಿಕೊಳ್ಳುತ್ತಾ, ಅಲ್ಲೇ ಇದ್ದರೆ ತಮ್ಮ ಪ್ರಾಣಕ್ಕೆ ಅಪಾಯವಾಗಬಹುದೆಂಬ ಭಯದಿಂದ ಚೆಲ್ಲಾ ಚೆದುರಾಗಿ ಓಡಿದರು.

ಹಾಗೆ ಓಡಿಬಂದ ಕೆಲವರು ರಾಜಧಾನಿ ನಗರಕ್ಕೆ ಸೇರಿದರು. ನಗರದ ಸಿಂಹದ್ವಾರದಲ್ಲಿ ಕಾವಲಿದ್ದ ಭಟರು, ಈ ವಿಷಯವನ್ನು ಸೇನಾಧಿಪತಿಗೆ ತಿಳಿಸಿದರು. ಸೇನಾಧಿಪತಿಯ ಆಜ್ಞಾನುಸಾರವಾಗಿ ಅವರನ್ನು ಸೈನಿಕರು, ಪ್ರತ್ಯೇಕವಾಗಿ ಏರ್ಪಡಿಸಿದ ಶಿಬಿರಗಳಿಗೆ ಕರೆದುಕೊಂಡು ಹೋದರು. ಶರಣಾರ್ಥಿಗಳಲ್ಲಿ



ಕೆಲವರು ದೇವಾಲಯದ ಪ್ರಾಂಗಣದಲ್ಲಿ ಮತ್ತೆ ಕೆಲವರು ವಸಂತೋತ್ಸವ ನಡೆಯುವ ಮೈದಾನದಲ್ಲಿ ಆ ರಾತ್ರಿಯನ್ನು ಕಳೆದರು.

ಯುವರಾಣಿ ಪ್ರಿಯಂವದ, ತನ್ನ ಸಖಿಯ ರೊಂದಿಗೆ ಸೇರಿ ರಾಜಪ್ರಾಸಾದದಲ್ಲಿ ಯಾವ ಭಾಗವನ್ನು ಶರಣಾರ್ಥಿಗಳಾದ ಸ್ತ್ರೀಯರಿಗೆ ಮಕ್ಕಳಿಗೆ ತೆರವು ಮಾಡಿಕೊಟ್ಟರೆ ಚೆನ್ನಾಗಿರುವುದೆಂದು ಪರಿ ಶೀಲಿಸಿ ಆ ಭಾಗವನ್ನು ಖಾಲಿ ಮಾಡಿಸಿ ಸಿದ್ಧ ಗೊಳಿಸುವುದರಲ್ಲಿ ಅರ್ಧರಾತ್ರಿ ದಾಟಿತು.

ಬೆಳಗಾಗುತ್ತಲೇ ರಾಜ ಪ್ರತಾಪವರ್ಮನು, ಸೇನಾಧಿಪತಿ ಗಂಭೀರಸಿಂಹನೊಂದಿಗೆ, ಶರಣಾರ್ಥಿ ಗಳಾಗಿ ಬಂದ ಪ್ರಜೆಗಳನ್ನು ಪರಾಮರ್ಶಿಸಲು ಹೋದನು. ರಾಜನನ್ನು ನೋಡಿದ ಪ್ರಜೆಗಳು, "ಮನೆ, ಮಠ, ದನಕರು, ಎಲ್ಲವನ್ನೂ ಬಿಟ್ಟು ಉಟ್ಟಬಟ್ಟೆಯೊಂದಿಗೆ ಓಡಿ ಬಂದಿದ್ದೇವೆ. ಮಹಾ ರಾಜಾ! ತಿರುಗಿ ಹೋಗಲು ಭಯವಾಗಿದೆ. ತಿರುಗಿ ಹೋದರೂ ನಮ್ಮ ಮನೆಗಳೆಲ್ಲಾ ನಾಶವಾಗದೆ ಇರುವುದೆಂಬ ನಂಬಿಕೆ ಇಲ್ಲ. ಯಾವ ನಿಮಿಷದಲ್ಲಿ ಎಂಥಾ ಆಪತ್ತು ಬರುವುದೋ ತಿಳಿಯದು" ಎಂದರು ದೀನತೆಯಿಂದ.

"ನಿಮಗೆ ರಕ್ಷಣೆ ಕೊಡುವ ಹೊಣೆ ನನ್ನದು. ನಿಮ್ಮ ಪ್ರಾಣಕ್ಕಾಗಲೀ, ನಿಮ್ಮ ಆಸ್ತಿಪಾಸ್ತಿಗಾಗಲೀ ಯಾವ ವಿಧವಾದ ಹಾನಿ ಬರುವುದಿಲ್ಲ. ನೀವು ನಿಶ್ಚಿಂತೆಯಿಂದ ಇರಿ" ಎಂದು ರಾಜನು ಅವರನ್ನು ಆಪ್ಯಾಯತೆಯಿಂದ ಸಮಾಧಾನ ಮಾಡಿ, ಸೇನಾಧಿ ಪತಿಯನ್ನು ನೋಡಿದ.

ನಿನ್ನೆಯೇ ನಮ್ಮ ಕೆಲವು ಸೈನಿಕರನ್ನು ದಕ್ಷಿಣ ಪ್ರಾಂತ್ಯಕ್ಕೆ ಕಳುಹಿಸಿದ್ದೇನೆ. ಎಂತಾ ಆಪತ್ತು ಬಂದರೂ ಎದುರಿಸಲು ಸಿದ್ಧರಾಗಿ ಹೋಗಿರುವರು. ಗ್ರಾಮಸ್ಥರು ಬಿಟ್ಟು ಬಂದ ಮನೆಗಳನ್ನು, ಆಸ್ತಿಪಾಸ್ತಿಗಳನ್ನು ಚೆಕ್ಕು ಚೆದರದೆ ರಕ್ಷಿಸುವ ಹೊಣೆಯನ್ನು ನಮ್ಮ ಸೈನಿಕರಿಗೆ ಒಪ್ಪಿಸಿದ್ದೇನೆ. ಸರತಿಯಂತೆ ಅಂದರೆ ಬೆಳಿಗ್ಗೆಯಿಂದ ಸಂಜೆಯವರೆಗೂ ಕೆಲವರನ್ನು, ಸಂಜೆ ಯಿಂದ ಬೆಳಗಾಗುವರೆಗೂ ಕೆಲವರನ್ನು ಕಾವಲಿರಲು ಏರ್ಪಾಡು ಮಾಡಿದ್ದೇನೆ ಪ್ರಭೂ! ಅದಕ್ಕೆ ಬೇಕಾದಷ್ಟು ಸೈನಿಕರನ್ನು ಕಳುಹಿಸಿದ್ದೇನೆ. ಅದರಿಂದ ಇವರು ತಮ್ಮ ಮನೆಗಳ ಭದ್ರತೆಯ ಬಗ್ಗೆ ಚಿಂತಿಸಬೇಕಾದ ಪ್ರಮೇಯವಿಲ್ಲ" ಎಂದ ಸೇನಾಧಿಪತಿ.

"ಹಾಗೇನು?" ಎಂದ ರಾಜ ಸಂತೋಷದಿಂದ.

"ಮತ್ತೊಂದು ಶುಭ ವಾರ್ತೆ ಪ್ರಭೂ! ಶರಣಾರ್ಥಿ ಗಳಾಗಿ ಬಂದ ಮಹಿಳೆಯರಿಗಾಗಿ, ಮಕ್ಕಳಿಗಾಗಿ, ಯುವರಾಣಿ ಪಶ್ಚಿಮ ದಿಕ್ಕಿನಲ್ಲಿರುವ ಭಾಗವನ್ನು ಬಿಟ್ಟು ಕೊಟ್ಟಿರುವರು. ಸ್ವತಹ ಅಲ್ಲಿಯ ಏರ್ಪಾಡು ಗಳನ್ನೆಲ್ಲಾ ನೋಡಿ, ಯುವರಾಣಿಯವರು ಮಲಗು ವಾಗ ಅರ್ಧರಾತ್ರಿ ದಾಟಿತ್ತೆಂದು ಪರಿಚಾರಿಕೆಯರು

ನನಗೆ ತಿಳಿಸಿದರು'' ಎಂದ ಸೇನಾಧಿಪತಿ.

"ಬಡವರಿಗೆ ಸಹಾಯ ಮಾಡಬೇಕೆಂಬ ಪರೋಪಕಾರದ ಬುದ್ಧಿ ಪ್ರಿಯಂವದೆಗೆ ಬಾಲ್ಯದಿಂದಲೇ ಇದೆ. ಸರಿ! ಅಲ್ಲಿಯ ಏರ್ಪಾಡುಗಳು ಹೇಗಿದೆ ಎಂದು ಹೋಗಿ ನೋಡೋಣ'' ಎಂದ ರಾಜ.

"ಅಪ್ಪಣೆ ಪ್ರಭೂ!'' ಎಂದು ಸೇನಾಧಿಪತಿ ರಾಜನ ಹಿಂದೆ ನಡೆದ.

ರಾಜನೂ, ಸೇನಾಧಿಪತಿಯೂ ರಾಜಪ್ರಾಸಾದದ ಪಶ್ಚಿಮ ಭಾಗವನ್ನು ಸೇರಿದಾಗ ಅಲ್ಲಿ ಹೆಂಗಸರು, ಗುಂಪು ಗುಂಪಾಗಿ ನಿಂತು ನಗುನಗುತ್ತಾ ಮಾತಾಡುತ್ತಿದ್ದರು. ತಮ್ಮ ಸ್ವಂತ ಮನೆಗಳಲ್ಲಿ ಇರುವಂತೆ ಸ್ವತಂತ್ರದಿಂದ, ಸಂತೋಷದಿಂದ ಜೋರಾಗಿ ಮಾತಾಡುತ್ತಿದ್ದರು.ಅವರನ್ನು ನೋಡಿದರೆ ತವರಿಗೆ ಬಂದ ಹೆಣ್ಣುಮಕ್ಕಳಂತೆ ಇದ್ದರು. ಇನ್ನು ಮಕ್ಕಳು! ಅರಮನೆಯನ್ನು ತಮ್ಮ ಆಟದ ಮನೆಯನ್ನಾಗಿ ಮಾಡಿಕೊಂಡು ಆಟಪಾಡುತ್ತಿದ್ದರು. ಈ ದೃಶ್ಯವನ್ನು ನೋಡಿದ ಮಹಾರಾಜನು ಸಂತೋಷಭರಿತನಾದನು. ತನ್ನ ಮಗಳು ಪ್ರಿಯಂವದೆ ಅವರೆಲ್ಲರನ್ನು ಅತ್ಯಂತ ಪ್ರೀತಿಯಿಂದ ಕಂಡು ಆದರಿಸಿ ಉಪಚರಿಸುತ್ತಿದ್ದಾಳೆ ಎಂದು ಅರ್ಥ ಮಾಡಿಕೊಂಡನು. ಅಷ್ಟರಲ್ಲಿ ಒಬ್ಬ ಪರಿಚಾರಿಕೆ ಬಂದು, ಮಹಿಳೆಯರನ್ನು ಹಾಗೂ ಮಕ್ಕಳನ್ನು ಭೋಜನವು ತಯಾರಾಗಿದೆ. ಎಲೆ ಹಾಕಿದೆ. ಬಂದು ಭೋಜನ ಮಾಡಿರೆಂದು ಪ್ರೀತಿ ಗೌರವಗಳಿಂದ ಆಹ್ವಾನಿಸಿದಳು. ಎಲ್ಲರೂ ವರಸೆ ವರಸೆಯಾಗಿ ಹಾಕಿರುವ ಬಾಳೆ ಎಲೆಗಳ ಮುಂದೆ ಕುಳಿತುಕೊಂಡರು. ಮಗಳಿಗಾಗಿ ತಂದೆಯ ಕಣ್ಣುಗಳು ಅರಸುತ್ತಿದ್ದವು. ಕೆಲವೇ ಕ್ಷಣಗಳಲ್ಲಿ ಯುವರಾಣಿ ಪ್ರಿಯಂವದೆಯ ಹಿಂದೆ ಬಂದ ಪರಿಚಾರಿಕೆಯರು ಪಾತ್ರೆಗಳಲ್ಲಿ ತಂದಿರುವ ಭೋಜನವನ್ನು ಎಲ್ಲರಿಗೂ ಬಡಿಸಿದರು. ಎಲ್ಲರೂ ಸಂತೋಷದಿಂದ





ಊಟ ಮಾಡುತ್ತಿರುವ ದೃಶ್ಯವನ್ನು ನೋಡಿ ರಾಜನು ಪರಮಾನಂದ ಹೊಂದಿ "ಪ್ರಿಯಂವದಾ! ನಿನ್ನ ಔದಾರ್ಯವನ್ನು ಮೆಚ್ಚಬೇಕು. ಕಷ್ಟದಲ್ಲಿ ಇದ್ದವರಿಗೆ ಸಹಾಯ ಮಾಡಿದಾಗಲೇ ಮಾನವ ಜನ್ಮ ಸಾರ್ಥಕತೆ ಪಡೆಯುತ್ತೆ. ಆ ವಿಷಯ ಗ್ರಹಿಸಿದ ನಿನ್ನನ್ನು ನೋಡುತ್ತಿದ್ದರೆ ನನಗೆ ಎಷ್ಟೋ ಆನಂದವಾಗಿದೆ. ನಿನ್ನನ್ನು ಮಗಳಾಗಿ ಪಡೆದಿದ್ದಕ್ಕೆ ನಾನು ಹೆಮ್ಮೆ ಪಡುತ್ತಿದ್ದೇನೆ. ಈ ಬಡ ಪ್ರಜೆಗಳು ನೀನು ಮಾಡಿದ ಉಪಕಾರವನ್ನು ಬಹಳ ಕಾಲ ನೆನಪಿಟ್ಟುಕೊಳ್ಳುತ್ತಾರೆ. ಇವರೆಲ್ಲರೂ ಇಲ್ಲಿ ಇರುವವರೆಗೂ ಇಂದಿನಂತೆ ಇವರ ಆವಶ್ಯಕತೆಗಳನ್ನು ಪೂರೈಸುವ ಗುರುತರ ವಾದ ಹೊಣೆಯನ್ನು ನಿನಗೆ ಒಪ್ಪಿಸುತ್ತಿದ್ದೇನೆ" ಎಂದನು ಯುವರಾಣಿಯೊಂದಿಗೆ.

ಯುವರಾಣಿ ಸಿರಿ ಎನ್ನುವಂತೆ ಮುಗುಳ್ನಗೆಯಿಂದ ತಲೆ ಆಡಿಸಿದಳು. ನಂತರ "ನಿಮಗೆ ಇಲ್ಲಿಯ ವಿಷಯಗಳ ಬಗ್ಗೆ ಯೋಚನೆ ಬೇಡ ಅಪ್ಪಾ! ಇಲ್ಲಿರುವ ಜನಕ್ಕೆ ಯಾವ ಕೊರತೆಯೂ ಇಲ್ಲದಂತೆ ನೋಡಿಕೊಳ್ಳುವ ಬಾಧ್ಯತೆ ನನ್ನದು. ಮಿಕ್ಕ ಕಡೆ ಇರುವ ಶರಣಾರ್ಥಿಗಳ ಬಗ್ಗೆ ನೀವು ಆಲೋಚಿಸಿ" ಎಂದಳು ವಿನಯದಿಂದ.

ರಾಜನೂ ಸೇನಾಧಿಪತಿಯು ಅಲ್ಲಿಂದ ಹೊರಟು ಅರಮನೆಯ ಮುಖ್ಯ ಭವನವನ್ನು ಸಮೀಪಿಸು ತ್ತಿರಲು ನಾಲ್ಕು ಜನ ಸೈನಿಕರು ಎದುರಾಗಿ ಬಂದರು. ಆದರೇಕೋ ಅವರ ಮುಖದಲ್ಲಿ ಕಳವಳ, ಚಿಂತೆ ಗಳು ತಾಂಡವವಾಡುತ್ತಿರುವುದು ಎಂಬುದನ್ನು ಸೇನಾಧಿಪತಿ ಗಮನಿಸಿದನು.

"ಏಕೆ ಹೀಗಿರುವಿರಿ? ಏನು ನಡೆಯಿತು?" ಎಂದು ಕೇಳಿದ ಸೇನಾಧಿಪತಿ.

"ನಿನ್ನೆ ದಕ್ಷಿಣ ಪ್ರಾಂತ್ಯಕ್ಕೆ ಹೋದ ನಮ್ಮ ಸೈನಿಕರ ಜಾಡೇ ತಿಳಿಯುತ್ತಿಲ್ಲ ಪ್ರಭೂ" ಎಂದರು ಆ ಸೈನಿಕರು.

"ಏನಾದರು?" ಎಂದು ಸೇನಾಧಿಪತಿ ಕೋಪ, ಕಳವಳಗಳಿಂದ ಕೇಳಿದ.

"ಆ ವಿಷಯ ತಿಳಿಸಲು ಸಹಾ ಅಲ್ಲಿ ಯಾರೂ ಇಲ್ಲ. ಈ ದಿನ ಬೆಳಿಗ್ಗೆ ನಮ್ಮ ಸೈನಿಕರು ಅಲ್ಲಿಗೆ ಸೇರಿದಾಗ ಆ ಪ್ರಾಂತ್ಯವೆಲ್ಲಾ ನಿರ್ಮಾನುಷ್ಯ ವಾಗಿತ್ತು. ಅಲ್ಲದೆ ಸಮೀಪದ ಇನ್ನೂ ಕೆಲವು ಗ್ರಾಮಗಳು ನೆಲಸಮವಾಗಿ ಹೋಗಿವೆ" ಎಂದರು ಆ ಸೈನಿಕರು.

"ಬೆಳಿಗ್ಗೆ ಹೋದ ಸೈನಿಕರು ಅಲ್ಲಿಯೇ ಇರುವರೇ? ಅಥವಾ ಹಿಂತಿರುಗಿ ಬಂದಿರುವರೇ?" ಎಂದು ಕೇಳಿದ ಸೇನಾಧಿಪತಿ.

"ಮೂವರು ಸೈನಿಕರು ಬಂದು, ವಿಷಯವನ್ನು ಹೇಳಿ ತಕ್ಷಣ ಹಿಂತಿರುಗಿ ಹೊರಟು ಹೋದರು. ಅವರ ಹಿಂದೆ ನಮ್ಮ ದಳನಾಯಕ ವೀರಸಿಂಹರು

ಹೋಗಿರುವರು'' ಎಂದು ಸೈನಿಕರು.

"ಹೌದೇ? ವೀರಸಿಂಹನು ಬಂದೊಡನೆ ನನ್ನನ್ನು ನೋಡಲು ಅವನಿಗೆ ಹೇಳಿ'' ಎಂದು ಆಜ್ಞಾಪಿಸಿದ ಸೇನಾಧಿಪತಿ.

"ಅಪ್ಪಣೆ ಪ್ರಭೂ'' ಎಂದು ಸೈನಿಕರು ಹೊರಟು ಹೋದರು. "ಮತ್ತೆ ಕೆಲವು ಮನೆಗಳು ನೆಲಸಮವಾಗಿವೆ ಎಂದು ತಿಳಿದರೆ ಇಲ್ಲಿದ್ದವರು ಮತ್ತಷ್ಟು ಹೆದರುತ್ತಾರೆ. ಈ ವಿಷಯ ನಮ್ಮಿಬ್ಬರಲ್ಲೇ ಇರಲಿ. ಸಮುದ್ರ ತೀರಕ್ಕೆ ಹೋಗಿರುವ ದಳ ನಾಯಕನು ತಿರುಗಿ ಬಂದ ಮೇಲೆ ಬಹುಶಃ ನಮ್ಮ ಸೈನ್ಯವನ್ನು ಅಲ್ಲಿಗೆ ಕಳುಹಿಸಬೇಕಾಗಬಹುದು. ಅದಕ್ಕಾಗಿ ಸೈನ್ಯವನ್ನು ಸಿದ್ಧವಾಗಿ ಇಡುವುದು ಅವಶ್ಯ'' ಎಂದ ರಾಜ.

"ಹಾಗೆಯೇ ಮಾಡೋಣ ಪ್ರಭೂ! ದಳ ನಾಯಕನು ಬಂದ ನಂತರ ನಿಮ್ಮ ಬಳಿ ಬರುತ್ತೇನೆ'' ಎಂದು ಹೇಳಿ ಸೇನಾಧಿಪತಿ ಅಲ್ಲಿಂದ ಹೊರಟು ಹೋದನು.

ಸೈನಿಕರೊಂದಿಗೆ ಸಮುದ್ರ ತೀರಕ್ಕೆ ಹೋದ ದಂಡನಾಯಕನು ಆ ದಿನ ಸಾಯಂಕಾಲವೇ ಗಡಿಬಿಡಿಯಿಂದ ಹಿಂತಿರುಗಿ ಬಂದು ಸೇನಾಧಿಪತಿಗೆ ನಮಸ್ಕರಿಸಿದ.

"ಏಕೆ? ನಿನ್ನ ಮುಖ ನಿಸ್ತೇಜವಾಗಿದೆ? ಅಲ್ಲಿ ಏನು ನಡೆಯಿತು ಎಂದು ತಿಳಿದು ಬಂದಿರುವೆಯಾ?'' ಎಂದು ಕೇಳಿದ ಸೇನಾಧಿಪತಿ.

"ಎಲ್ಲಾ ವಿಚಿತ್ರವಾಗಿದೆ ಪ್ರಭೂ! ನಿನ್ನೆ ಹೊರಟ ನಮ್ಮ ಸೈನಿಕರು ಸಮುದ್ರ ತೀರಕ್ಕೆ ಸೇರಿದರೆಂಬುದರಲ್ಲಿ ಸಂದೇಹವಿಲ್ಲ. ಏಕೆಂದರೆ ಅವರ ಹೆಜ್ಜೆಯ ಗುರುತುಗಳು ಸ್ಪಷ್ಟವಾಗಿ ಕಾಣುತ್ತಿದೆ. ಅವರು ಅಲ್ಲಿಗೆ ಸೇರಿದ ಮೇಲೆ ಏನು ನಡೆಯಿತು ಎಂದು ತಿಳಿಯುತ್ತಿಲ್ಲ. ಹೇಳಲು ಅಲ್ಲಿ ಒಂದು ಪ್ರಾಣಿ ಇಲ್ಲ'' ಎಂದ ದಳನಾಯಕ.

"ಈಗ ಏನು ಮಾಡಬೇಕೆಂದು ಉದ್ದೇಶ?''





ಎಂದು ಕೇಳಿದ ಸೇನಾಧಿಪತಿ.

“ಸಮುದ್ರ ತೀರದಲ್ಲಿರುವ ಸೈನಿಕರೆಲ್ಲರೂ ಒಂದೇ ಕಡೆ ಇರದಂತೆ ಅವರನ್ನು ಮೂರು ಗುಂಪಾಗಿ ವಿಂಗಡಿಸಿದ್ದೇನೆ. ಮೊದಲನೆಯ ಗುಂಪು ಸಮುದ್ರ ತೀರದಲ್ಲಿ ಇರುತ್ತದೆ. ಎರಡನೇ ಗುಂಪು ಅವರಿಗೆ ಕೂಗು ಅಳತೆಯ ದೂರದಲ್ಲಿ ಇರುತ್ತದೆ. ಮೂರನೆಯ ಗುಂಪು ಇನ್ನೂ ತುಸು ದೂರದಲ್ಲಿ ಇರುತ್ತದೆ. ಮೂರು ಗುಂಪುಗಳಿಗೆ ನಡುವೆ ಸಮಾಚಾರಗಳು ತಲುಪುವಂತೆ ಅತಿ ಎಚ್ಚರಿಕೆಯಿಂದ ಇರಲು ಹೇಳಿದ್ದೇನೆ. ತಾವು ಅನುಮತಿಸಿದರೆ ಬೆಳಕು ಮೂಡಿದ ಮೇಲೆ ನಾನು ಒಮ್ಮೆ ಅಲ್ಲಿಗೆ ಹೋಗಿ ವಿಷಯ ತಿಳಿದು ಬರುತ್ತೇನೆ'' ಎಂದ ದಳನಾಯಕ.

“ಶಭಾಷ್! ಹಾಗೆಯೇ ಮಾಡು'' ಎಂದು ಹೇಳಿ ಸೇನಾಧಿಪತಿ ರಾಜಭವನಕ್ಕೆ ಹೋಗಿ ರಾಜನಿಗೆ ವಿಷಯ ತಿಳಿಸಿ ಅಲ್ಲಿಂದ ಶರಣಾರ್ಥಿಗಳ ಶಿಬಿರವನ್ನು ಪರಾಮರ್ಶಿಸಲು ಅಲ್ಲಿಗೆ ಹೋದನು.

ಅಲ್ಲಿಗೆ ಬಂದವರಿಗೆ ಆಹಾರ ಪಾನೀಯಗಳಿಗಾಗಲೀ, ವಿಶ್ರಾಂತಿ ಪಡೆಯಲಾಗಲೀ ಯಾವ ವಿಧವಾದ ತೊಂದರೆಯೂ ಇರಲಿಲ್ಲ. ರಾಜಭಟರು ಮಾತ್ರವಲ್ಲದೇ ನಗರ ಪ್ರಜೆಗಳೂ ಸಹ ಅವರಿಗೆ ಸಹಾಯ ಮಾಡುವುದನ್ನು ನೋಡಿ ಸೇನಾಧಿಪತಿ ಸಂತೋಷಿಸಿದ.

ಮರುದಿನ ಬೆಳಕು ಮೂಡುತ್ತಿರುವಾಗಲೇ ದಳನಾಯಕನು ಸೇನಾಧಿಪತಿಯ ಮನೆಗೆ ಬಂದನು. ಆತನನ್ನು ನೋಡುತ್ತಲೇ ಸೇನಾಧಿಪತಿ “ಆಗಲೇ ಹೋಗಿ ಬಂದೆಯಾ? ಹೇಗಿದೆ ಅಲ್ಲಿನ ಪರಿಸ್ಥಿತಿ?'' ಎಂದು ಕೇಳಿದ.

“ಬಹಳ ಭಯಾನಕವಾಗಿದೆ ಪ್ರಭೂ! ನಾನು ಹೊರಡುತ್ತಿರುವಾಗ ಅಲ್ಲಿಂದ ಕೆಲವು ಸೈನಿಕರು ಬಂದು ಹೇಳಿದರು. ಆ ಭೂತ ಮತ್ತೆ ಬಂದಿತಂತೆ'' ಎಂದನು ದಳನಾಯಕ.

“ಭೂತವೇ?'' ಎಂದ ಸೇನಾಧಿಪತಿ ಅತ್ಯಂತ ಆಶ್ಚರ್ಯದಿಂದ. ‘ಸೈನಿಕರಲ್ಲಿ ಯಾರೋ ಒಬ್ಬ ಹೆದರಿ ಈ ವದಂತಿಯನ್ನು ಹರಡಿದನೇ? ಅಥವಾ! ನಿಜವಾಗಿಯೂ ಭೂತ ಇರುವುದೇ? ಇಷ್ಟು ಕಾಲ ಇಲ್ಲದ ಆ ಭೂತ ಏಕೆ ಕಾಣಿಸಿಕೊಂಡಿದೆ? ಏಕೋ ನಂಬಲು ಆಗುತ್ತಿಲ್ಲ. ನಂಬದಿರಲೂ ಸಾಧ್ಯವಿಲ್ಲ' ಎಂದು ಗಂಭೀರಸಿಂಹನು ತನ್ನಲ್ಲಿ ತಾನೇ ಯೋಚಿಸಿಕೊಂಡಿರುವಾಗ,

“ಹೌದು ಪ್ರಭೂ! ಭೂತವೇ!! ಸರಿಯಾಗಿ ಅರ್ಧರಾತ್ರಿ ಸಮಯಕ್ಕೆ ಸಮುದ್ರದಿಂದ ಪರ್ವತಾಕಾರದಲ್ಲಿ ಒಂದು ಭೂತ ಮೇಲೆ ಬರುವದನ್ನು ನಮ್ಮ ಸೈನಿಕರು ನೋಡಿದರಂತೆ. ಅದು ನೆಲದ ಮೇಲೆ ನಡೆಯುತ್ತಿದೆಯೋ ಅಥವಾ ಗಾಳಿಯಲ್ಲಿ ತೇಲುತ್ತಿದೆಯೋ ಎಂದು ತಿಳಿಯಲಿಲ್ಲವಂತೆ. ಆದರೆ

ಅದು ತನ್ನ ತಲೆಯನ್ನು ಅತ್ತ ಇತ್ತ ಆಡಿಸುತ್ತಾ ಮೆಲ್ಲನೆ ಚಲಿಸುತ್ತಿರುವಾಗ, ಅದರ ಕಾಲಿನ ಕೆಳಗೆ ಮನೆಗಳು, ಮನೆಗಳಲ್ಲಿದ್ದ ಮನುಷ್ಯರು, ಮರಗಳು, ಸರ್ವವೂ ಹಾಗೆಯೇ ಭೂಮಿಯ ಒಳಗೆ ಇಳಿದು ಹೋಯಿತಂತೆ. ಆದರೆ ಅದು ಸ್ವಲ್ಪವೂ ಶಬ್ದ ಮಾಡದೆ ಭೀಕರವಾದ ತಲೆಯನ್ನು ಅತ್ತ ಇತ್ತ ತೂಗುತ್ತಾ, ಉತ್ತರ ದಿಕ್ಕಿಗೆ ಹೊರಟು ಹೋಯಿತಂತೆ. ಸಮುದ್ರ ತೀರದಲ್ಲಿದ್ದ ನಮ್ಮ ಸೈನಿಕರು ಅದರ ಪಾದದಡಿಯಲ್ಲಿ ಸಿಲುಕಿ ಮಣ್ಣಿನ ಒಳಗೆ ಮುಚ್ಚಿ ಹೋದರಂತೆ. ಅವರಿಗೆ ಸ್ವಲ್ಪ ದೂರದಲ್ಲಿ ನಿಂತಿದ್ದ ಸೈನಿಕರು ಆ ಭೂತವನ್ನು ಹಿಂದಿನಿಂದ ನೋಡಿದರೇ ವಿನಹಾ ಅದರ ಮುಖವನ್ನು ನೋಡಲಿಲ್ಲ. ಅಲ್ಲಿಂದ ಭಯ ಭೀತರಾಗಿ ಓಡಿ ಬಂದಿದ್ದಾರೆ'' ಎಂದ ದಳನಾಯಕ.

“ಅದು ಎಂಥಾ ಭೂತವಾಗಿರಬಹುದು? ಅದು ಏಕೆ ಉತ್ತರ ದಿಕ್ಕಿಗೆ ಹೋಯ್ತು? ಅಲ್ಲಿ ಹೋಗಿ ಇನ್ನೇನು ಮಾಡುವುದೋ?'' ಎಂದು ಸೇನಾಧಿಪತಿ ಮನಸ್ಸಿನಲ್ಲಿಯೇ ಅಂದುಕೊಂಡನು.

“ಪ್ರಭೂ! ನಮ್ಮ ಸೈನಿಕರು ಅದನ್ನು ಎದುರಿಸಿದ್ದರೆ, ಅವರು ಕೂಡಾ ಅದರ ಕಾಲ ಕೆಳಗೆ ಬಿದ್ದು ಭೂಮಿಯ ಅಡಿಗೆ ಹೋಗುತ್ತಿದ್ದರು. ಅವರು ಭಯದಿಂದ ತಿರುಗಿ ಬಂದಿದ್ದರಿಂದಲೇ ಅದರ ವಿಷಯ ನಮಗೆ ತಿಳಿಯಿತು'' ಎಂದು ಹೇಳಿದನು ದಳನಾಯಕ ವೀರಸಿಂಹ.

ಸೇನಾಧಿಪತಿ ತುಸು ಸಮಯ ಮೌನವಾಗಿ ಆಲೋಚಿಸಿ, “ಸರಿ. ಅದು ಉತ್ತರ ದಿಕ್ಕಿಗೆ ಹೋಯಿತೆಂದು ಹೇಳುತ್ತಿರುವೆ. ಅದು ಸಮುದ್ರದಿಂದ ಬಂದಿದ್ದರಿಂದ, ಬೆಳಗಾಗುತ್ತಲೇ ಮತ್ತೆ ಸಮುದ್ರದಲ್ಲಿ ಸೇರಿರಬಹುದೆಂದು ಭಾವಿಸುತ್ತೇನೆ. ಉತ್ತರ ದಿಕ್ಕಿಗೆ ನಮ್ಮ ಕೆಲವು ಸೈನಿಕರನ್ನು ಕಳುಹಿಸು. ಅಲ್ಲಿ ಏನಾದರೂ ಪ್ರಮಾದವಾಗಿರಬಹುದು. ದಕ್ಷಿಣ ಸಮುದ್ರ ತೀರದಲ್ಲಿ ಯಥಾ ಪ್ರಕಾರ ಕಾವಲು ಮುಂದುವರಿಯಲಿ. ನಿನ್ನೆ ರಾತ್ರಿಯಂತೆ ಸೈನಿಕರನ್ನು ಮೂರು ಗುಂಪಾಗಿ ವಿಂಗಡಿಸಿ ಕಾವಲಿಡು. ಆ ವಿಚಿತ್ರ ಭೂತವನ್ನು ಕುರಿತು ಮತ್ತೇನಾದರೂ ವಿಷಯ ತಿಳಿದರೆ ತಕ್ಷಣ ಬಂದು ಹೇಳು. ನಾನು ಈ ವಿಷಯವನ್ನು ಮಹಾರಾಜರಿಗೆ ತಿಳಿಸಿ ಬರುತ್ತೇನೆ. ಈ ಅಪಾಯದಿಂದ ಪ್ರಜೆಗಳನ್ನು ಕಾಪಾಡಬೇಕಾದ ಗುರುತರ ಹೊಣೆ ನಮ್ಮ ಮೇಲಿದೆ'' ಎಂದು ಹೇಳಿದನು ಸೇನಾಧಿಪತಿ.





# ವಿಚಿತ್ರಪುಷ್ಪ

೪

(ಮಾಣಿಕ್ಯಪುರಿಯ ದಕ್ಷಿಣ ಪ್ರಾಂತ್ಯದ ಸಮುದ್ರ ತೀರದಲ್ಲಿರುವ ಕೆಲವು ಗ್ರಾಮಗಳು, ನೆಲಸಮವಾಗಲು ಭಯಭ್ರಾಂತರಾಗಿ ಓಡಿ ಬಂದ ಕೆಲವು ಪ್ರಜೆಗಳು ರಾಜಧಾನಿ ನಗರಕ್ಕೆ ಬಂದು ಸೇರಿದರು. ರಾಜ, ಯುವರಾಜ ಹಾಗೂ ಸೇನಾಧಿಪತಿಯು ಅವರಿಗೆ ಆಶ್ರಯ ಕೊಡುವ ಏರ್ಪಾಡುಗಳಲ್ಲಿ ಮಗ್ನರಾದರು. ಸಮುದ್ರತೀರಕ್ಕೆ ಹೋಗಿ ಬಂದ ದಳನಾಯಕನು, ಅರ್ಧರಾತ್ರಿ ಸಮಯದಲ್ಲಿ ಸಮುದ್ರದಿಂದ ಬಂದ ಒಂದು ರಾಕ್ಷಸೀ ಮೃಗವೇ ಆ ಭೀಭತ್ಸವನ್ನು ಸೃಷ್ಟಿಸಿದೆ ಎಂದು ಸೇನಾಪತಿಗೆ ಹೇಳಿದನು. ಆಮೇಲೆ–)

ಸೇನಾಧಿಪತಿ ಗಂಭೀರಸಿಂಹನು ಏಕಾಏಕಿ ರಾಜ ಭವನಕ್ಕೆ ಹೋಗಿ ದಳನಾಯಕನಾದ ವೀರ ಸಿಂಹನು ಹೇಳಿದ ವಿಷಯವನ್ನು ರಾಜನಿಗೆ ಅರಿಕೆ ಮಾಡಿದನು. ಆ ಸುದ್ದಿಯನ್ನು ಕೇಳಿದ ರಾಜ ಪ್ರತಾಪವರ್ಮನು "ಏನು! ನಾವು ತಿಳಿದಂತೆ ಅದು ಭೂತವಲ್ಲವೇ? ರಾಕ್ಷಸೀ ಮೃಗವೇ?? ಚರಿತ್ರೆಗೂ ತಿಳಿಯದ ಕಾಲದಲ್ಲಿ, ಎಂದೋ ಇತ್ತೆಂದು ಹೇಳುತ್ತಿದ್ದ ರಾಕ್ಷಸೀ ಮೃಗಗಳು ಇರುವುದು ಅಸಂಭವ. ಆ ಮೃಗವನ್ನು ಕಣ್ಣಿನಿಂದ ನೋಡಿದವರು ಇಲ್ಲಿಗೆ ಯಾರೂ ಬರಲಿಲ್ಲ. ಸೈನಿಕರು ಹೇಳಿದ ವಿಷಯವನ್ನು ದಳನಾಯಕನು ನಿನಗೆ ಹೇಳಿದ್ದಾನೆ. ಅದರಿಂದ ಅವರ ಮಾತುಗಳಲ್ಲಿ ಎಷ್ಟು ಮಟ್ಟಿಗೆ ನಿಜವಿದೆ ಎಂದು ಆಲೋಚಿಸಬೇಕು" ಎಂದು ಹೇಳಿದನು.

"ನಿಜ ಪ್ರಭೂ! ದಳನಾಯಕನಾದ ವೀರಸಿಂಹನು ನೆಲಮಟ್ಟವಾದ ಗ್ರಾಮಗಳನ್ನು ನೋಡಿದನೇ ವಿನಹಾ ರಾಕ್ಷಸೀಮೃಗವನ್ನು ನೋಡಲಿಲ್ಲ. ಆದರೆ ಗ್ರಾಮಕ್ಕೆ ಗ್ರಾಮಗಳೇ ಹಾಗೆ ನಾಶವಾಗಿ



ಹೋಗುತ್ತಿರುವುದಕ್ಕೆ ಪ್ರಕೃತಿಯ ವಾತಾವರಣದಲ್ಲಿ ಯಾವ ವೈಪರೀತ್ಯವೂ ನಡೆಯಲಿಲ್ಲವೆಂದು ತಿಳಿಯುತ್ತಲೇ ಇದೆ। ಅದರಿಂದ ಆ ರಾಕ್ಷಸೀ ಮೃಗವನ್ನು ನೋಡಿದೆವೆಂದು ಹೇಳುವ ನಮ್ಮ ಸೈನಿಕರ ಮಾತನ್ನು ಆಧಾರರಹಿತವಾದದ್ದು ಎಂದು ನಿರಾಕರಿಸುವುದು ಸರಿ ಅಲ್ಲವೆಂದು ನನಗೆ ತೋರುತ್ತಿದೆ. ತಾವು ಅನುಮತಿ ನೀಡಿದರೆ ಈ ರಾತ್ರಿ ನಾನೇ ಆ ಸ್ಥಳಕ್ಕೆ ಹೋಗಿ, ಅಲ್ಲಿ ನಡೆದಿದ್ದಾದರೂ ಏನೆಂದು ತಿಳಿದುಕೊಂಡು ಬರುತ್ತೇನೆ'' ಎಂದನು ವಿನಯದಿಂದ ಸೇನಾಧಿಪತಿ ಗಂಭೀರಸಿಂಹ.

"ಒಳ್ಳೆಯದು! ಇಂದೇ ಹೋಗಿ ಬಾ. ನೀನು ಬರುವುದರಲ್ಲಿ ನಾನು ರಾಜಗುರುಗಳನ್ನು ಕರೆಸಿ ಏನು ಮಾಡಬೇಕೆಂದು ಆಲೋಚಿಸುತ್ತೇನೆ'' ಎಂದು ಹೇಳಿದನು ರಾಜ.

"ಅಪ್ಪಣೆ ಮಹಾರಾಜಾ!'' ಎಂದು ಅಲ್ಲಿಂದ ಹೊರಟ ಸೇನಾಧಿಪತಿ ಶರಣಾರ್ಥಿಗಳಾಗಿ ಬಂದಿರುವ ಮಹಿಳೆಯರು, ಮಕ್ಕಳು ಆಶ್ರಯ ಪಡೆದಿರುವ ರಾಜಪ್ರಾಸಾದದ ಪಶ್ಚಿಮ ಪಾರ್ಶ್ವಕ್ಕೆ ಹೋದನು. ಸೇನಾಧಿಪತಿಯನ್ನು ನೋಡಿದೊಡನೆ ಅಲ್ಲಿ ಕಾವಲಿದ್ದ ಭಟರು ಆತನಿಗೆ ಗೌರವದಿಂದ ನಮಸ್ಕರಿಸಿ "ಎಲ್ಲವೂ ಸಕ್ರಮವಾಗಿ ನಡೆಯುತ್ತಿದೆ ಪ್ರಭೂ! ಇಲ್ಲಿ ಯಾವ ಸಮಸ್ಯೆಯೂ ಇಲ್ಲ. ಶರಣಾರ್ಥಿಗಳನ್ನು ನೋಡಲು ಯುವರಾಣಿ ಅವರು ಸಹಾ ಈಗ ತಾನೇ ಬಂದಿರುವರು'' ಎಂದು ಹೇಳಿದರು.

ಗಂಭೀರಸಿಂಹನು ಕುದುರೆಯಿಂದ ಇಳಿದು, ಎರಡು ಕಡೆ ಕಲ್ಲುಸ್ಥಂಭಗಳಿರುವ ವಿಶಾಲವಾದ ಮಂಟಪದಲ್ಲಿ ಅಡಿ ಇಟ್ಟ. ಆಗ ಪಕ್ಕದ ಕೋಣೆಯಿಂದ ಸಾಧಾರಣ ಉಡುಪು ಧರಿಸಿದ್ದ ಯುವರಾಣಿ ಪ್ರಿಯಂವದ ಇಬ್ಬರು ಸಖಿಯರೊಂದಿಗೆ ಹೊರಗೆ ಬಂದಳು. ಸೇನಾಧಿಪತಿಯನ್ನು ನೋಡಿದೊಡನೆ ಆಕೆ "ಇಲ್ಲಿ ಉಳಿದುಕೊಂಡ ಆಶ್ರಿತರಿಗೆ ಆಹಾರಪಾನೀಯಗಳಲ್ಲಿ ಯಾವ ಕೊರತೆಯೂ ಇಲ್ಲ. ಚಿಕ್ಕಮಕ್ಕಳಿಗೆ ಯಾವ ಅನಾರೋಗ್ಯವೂ ಬಾರದಂತೆ, ತಕ್ಕ ಮುಂಜಾಗ್ರತೆಯನ್ನು ವಹಿಸಬೇಕೆಂದು ಆಸ್ಥಾನ ವೈದ್ಯರಿಗೆ ಹೇಳಿದ್ದೇನೆ'' ಎಂದಳು.

"ತುಂಬ ಸಂತೋಷ ಯುವರಾಣೀ! ಚಿಕ್ಕ ಮಕ್ಕಳ ಕ್ಷೇಮದ ಬಗ್ಗೆ ತಾವು ತೋರಿಸುತ್ತಿರುವ ಶ್ರದ್ಧೆ ಪ್ರಶಂಸನೀಯವಾದದ್ದು. ಪ್ರತಿ ವಿಚಾರದಲ್ಲಿಯೂ ಮುಂಜಾಗ್ರತೆಯಿಂದ ವ್ಯವಹರಿಸುವುದು ಒಳ್ಳೆಯದು'' ಎಂದನು ಸೇನಾಧಿಪತಿ.

"ಇಲ್ಲಿ ಸ್ತ್ರೀಯರು ಸುಖ ಸಂತೋಷಗಳಿಂದ ಇರುವರು. ಆದರೆ ತಮ್ಮ ಪತಿಯರನ್ನು ಕಾಣಲು

ಕಾತರಿಸುತ್ತಿದ್ದಾರೆ. ಅದರಿಂದ ದೂರದ ಶಿಬಿರಗಳಲ್ಲಿ ಇರುವ ಅವರ ಪುರುಷರು ಬಂದು, ಒಂದು ಬಾರಿ ತಮ್ಮ ಮಡದಿ ಮಕ್ಕಳನ್ನು ನೋಡಲು ಏರ್ಪಾಡು ಮಾಡಿದರೆ ಚೆನ್ನಾಗಿರುತ್ತದೆ'' ಎಂದಳು ಯುವರಾಣಿ.

"ಹಾಗೆಯೇ ಮಾಡುತ್ತೇನೆ ಯುವರಾಣೀ! ನಾಳೆ ಸಾಯಂಕಾಲಕ್ಕೆ ಕೆಲವರನ್ನು ಕಳುಹಿಸುವ ಏರ್ಪಾಡು ಮಾಡುತ್ತೇನೆ'' ಎಂದು ಹೇಳಿದ ಸೇನಾಧಿಪತಿ ಅಲ್ಲಿಂದ ಶರಣಾರ್ಥಿಗಳು ಇರುವ ಬೇರೊಂದು ಶಿಬಿರಕ್ಕೆ ಹೊರಟನು.

ಅಷ್ಟರಲ್ಲಿ ದಳನಾಯಕನಾದ ವೀರಸಿಂಹನು ಎದುರಿಗೆ ಬಂದು ನಮಸ್ಕರಿಸಿ. "ಈ ದಿನ ಮತ್ತೆ ಕೆಲವು ಸೈನಿಕರು ಗಾಯಗಳೊಂದಿಗೆ ತಿರುಗಿ ಬಂದಿದ್ದಾರೆ. ಅವರಿಗೆ ನಮ್ಮ ರಾಜವೈದ್ಯರು ಚಿಕಿತ್ಸೆ ಮಾಡುತ್ತಿದ್ದಾರೆ.- ಆದರೂ ಅವರು ಅತ್ಯಂತ ಹೆದರಿಕೆಯಿಂದ ರಾಕ್ಷಸೀಮೃಗದ ಬಗ್ಗೆ ಕನವರಿಸುತ್ತಿದ್ದಾರೆ'' ಎಂದನು.

"ಅವರ ಮಾತುಗಳು ಒಂದು ವೇಳೆ ನಿಜವೇ ಆಗಿದ್ದರೆ ನಮ್ಮ ರಾಜ್ಯ ಭಯಂಕರವಾದ ಆಪತ್ತಿಗೆ ಒಳಗಾಗುವುದು ಖಂಡಿತ. ಅದನ್ನು ಎದುರಿಸಲು ಇತರರ ಸಹಾಯವನ್ನೂ ಕೇಳಬೇಕಾಗಿ ಬರಬಹುದು. ಯಾವುದಕ್ಕೂ ಆ ರಾಕ್ಷಸೀ ಮೃಗವನ್ನು ಕುರಿತ ವಿಷಯಗಳನ್ನು ಪ್ರತ್ಯಕ್ಷವಾಗಿ ತಿಳಿದುಕೊಳ್ಳುವುದು ಅವಶ್ಯವಾಗಿದೆ. ಆದ್ದರಿಂದ ನಾನೇ ಸ್ವತಹಾ ನಮ್ಮ ರಾಜ್ಯದ ದಕ್ಷಿಣ ಪ್ರಾಂತ್ಯಕ್ಕೆ ಹೋಗುತ್ತಿದ್ದೇನೆ. ನೀನು ನನ್ನೊಂದಿಗೆ ಬರಬೇಕು. ಸಂಧ್ಯಾ ಸಮಯಕ್ಕೆ ಸಿದ್ಧನಾಗಿರು'' ಎಂದು ಆಜ್ಞಾಪಿಸಿದ ಸೇನಾಧಿಪತಿ.

"ಸೈನಿಕ ದಳವನ್ನು ನಮ್ಮೊಂದಿಗೆ ಕರೆದುಕೊಂಡು ಹೋಗೋಣವೇ ಪ್ರಭೂ!'' ಎಂದು ಕೇಳಿದ ದಳನಾಯಕ.

"ಬೇಡ! ನಿನ್ನೊಂದಿಗೆ ಮತ್ತೆ ಮೂರು ಜನ





ಸೈನಿಕರು ಬಂದರೆ ಸಾಕು. ಆದರೆ ಈ ರಾತ್ರಿ ಕಾವಲಿಗೆ ಹೋಗುವ ಭಟರನ್ನು ಯಥಾ ಪ್ರಕಾರವಾಗಿ ಹೋಗುವಂತೆ ಹೇಳು. ನಾವು ಪ್ರತ್ಯೇಕವಾಗಿ ಹೋಗೋಣ. ನಮ್ಮ ಪ್ರಯಾಣದ ವಿಷಯ ಬೇರೆ ಯಾರಿಗೂ ತಿಳಿಯಬಾರದು'' ಎಂದ ಸೇನಾಧಿಪತಿ.

ಆ ದಿನ ಮಧ್ಯಾಹ್ನ ಸೇನಾಧಿಪತಿ ದಳನಾಯಕ ಮತ್ತೆ ಮೂವರು ಸೈನಿಕರು ಕುದುರೆಗಳನ್ನು ಹತ್ತಿ ಮಾಣಿಕ್ಯಪುರಿಯ ದಕ್ಷಿಣ ಸರಹದ್ದಿಗೆ ಹೊರಟರು. ಸಾಯಂಕಾಲಕ್ಕೆ ಸಮುದ್ರ ತೀರವನ್ನು ಸೇರಿದರು. ಅಲ್ಲಿದ್ದ ಗ್ರಾಮಗಳೆಲ್ಲಾ ನೆಲಸಮವಾಗಿ, ಮರ-ಗಿಡಗಳು ನಾಶವಾಗಿ ಹೋಗಿರುವುದು ಕಂಡಿತು. ನಿರ್ಮಾನುಷ್ಯವಾಗಿದ್ದ ಗ್ರಾಮಗಳನ್ನು ಕಾವಲು ಕಾಯುತ್ತಿದ್ದ ಭಟರು ಅವರ ಎದುರಿಗೆ ಬಂದು ನಮಸ್ಕರಿಸಿದರು.

ಸೇನಾಧಿಪತಿ, ದಳನಾಯಕನು ಅವರನ್ನು ದಾಟಿ ಸಮುದ್ರ ತೀರದಲ್ಲಿ ಮರಳಿನ ಮೇಲೆ ಅಡಿಯ ಗುರುತುಗಳು ಏನಾದರೂ ಕಾಣುತ್ತದೆಯೋ ಎಂದು ಎಚ್ಚರಿಕೆಯಿಂದ ಪಾಶೀಲಿಸಲು ಆರಂಭಿಸಿದರು. ಒಂದು ಕಡೆ ಏನನ್ನೋ ನೆಲದ ಮೇಲೆ ಎಳೆದುಕೊಂಡು ಹೋದಂತೆ ಸಮಾಂತರವಾಗಿದ್ದ ಎರಡು ವಿಶಾಲವಾದ ನೀಳವಾದ ಗೆರೆಗಳು ಕಂಡಿತು. ಆ ನೀಳಗೆರೆಗಳು ಸಮುದ್ರ ಜಲದಿಂದ ಆರಂಭಿಸಿ, ಉತ್ತರದಿಕ್ಕಿನಲ್ಲಿ ಬಹಳ ದೂರದವರೆಗೂ ಕಂಡಿತು. ಆ ಗೆರೆಗಳ ನಡುವೆ ಅಲ್ಲಲ್ಲಿ ಕೆಲವು ಬರಿದಾಗಿ ಕಾಣಿಸಿತು. ಸಮುದ್ರದ ನೀರಿಗೆ ಸಮೀಪದಲ್ಲಿ ಒದ್ದೆಯಾಗಿರುವ ಮರಳಿನ ಮೇಲೆ, ಆ ಗೆರೆಗಳಿಗೆ ಬದಲಾಗಿ, ಎರಡು ದೊಡ್ಡ ಪಾದಗಳ ಗುರುತು ಕಾಣುತ್ತಲೇ ದಳನಾಯಕನು ಅವುಗಳನ್ನು ಸೇನಾಧಿಪತಿಗೆ ತೋರಿಸುತ್ತಾ "ಸಮುದ್ರದಿಂದ ಯಾವುದೋ ದೊಡ್ಡ ಪ್ರಾಣಿ ಹೊರಗೆ ಬಂದಿದೆ ಎನ್ನುವುದರಲ್ಲಿ ಎಳ್ಳಷ್ಟೂ ಸಂದೇಹವಿಲ್ಲ ಪ್ರಭೂ'' ಎಂದನು.

"ಹೌದು! ಸಮುದ್ರದಿಂದ ಹೊರಗೆ ಬಂದ ಆ ವಿಚಿತ್ರ ಪ್ರಾಣಿ ಮತ್ತೆ ಸಮುದ್ರದ ಒಳಗೆ ಹೋಗಿ ಸೇರಿಕೊಂಡಿರಬೇಕು. ಈ ಗೆರೆಗಳು ಉತ್ತರ ದಿಕ್ಕಿಗೆ ಮಾತ್ರವೇ ಹೋಗುತ್ತಿರುವುದನ್ನು ಗಮನಿಸಿದೆಯಾ?'' ಎಂದು ಕೇಳಿದ ಸೇನಾಧಿಪತಿ.

"ನಿಜ ಪ್ರಭೂ!'' ಎಂದು ಹೇಳಿದ ದಳನಾಯಕನು ಮತ್ತೇನಾದರೂ ಗುರುತುಗಳು ಕಾಣುತ್ತದೆಯೋ ಎಂದು ಸಮುದ್ರ ತೀರವೆಲ್ಲಾ ಪರೀಕ್ಷಿಸಿ ನೋಡಲು ಆರಂಭಿಸಿದ. ಸ್ವಲ್ಪ ಸಮಯದಲ್ಲೇ ಕತ್ತಲಾಯಿತು. ಅನಂತರ ಯಾವುದೂ ಸ್ಪಷ್ಟವಾಗಿ ಕಾಣಿಸಲಿಲ್ಲ. ಆ ರಾತ್ರಿ ಅವರು ಕಾವಲಿದ್ದ ಭಟರಿಗೆ ತುಸು ದೂರ

ದಲ್ಲಿಯೇ ಇರಬೇಕೆಂದು ನಿಶ್ಚಯಿಸಿಕೊಂಡರು. ಆ ವಿಷಯ ಕಾವಲಿದ್ದ ಭಟರಿಗೆ ಸಹಾ ತಿಳಿಯದು.

ಅರ್ಧರಾತ್ರಿ ದಾಟಿತು. ಒಂದು ಕಡೆ ಸಮುದ್ರ, ಮತ್ತೊಂದು ಕಡೆ ವಿಶಾಲವಾದ ಮರಳಿನ ಮೈದಾನ. ಆಕಾಶದಲ್ಲಿ ಅಲ್ಲಲ್ಲಿ ಮಿನುಗುತ್ತಿರುವ ನಕ್ಷತ್ರಗಳು ಇವುಗಳನ್ನು ಬಿಟ್ಟರೆ ಮತ್ತಿನ್ನೇನೂ ಕಾಣಿಸುತ್ತಲೇ ಇಲ್ಲ.

ನಾಲ್ಕನೆಯ ಜಾವ ಆರಂಭವಾದೊಡನೆ, ಸೇನಾಧಿಪತಿಗೆ ಉತ್ತರ ದಿಕ್ಕಿನಲ್ಲಿ ಕತ್ತಲಿನ ಬೆಟ್ಟದ ಹಾಗೆ ಯಾವುದೋ ಒಂದು ಆಕಾರ ಕದಲುತ್ತಿರುವುದು ಕಾಣಿಸಿತು. ಆ ಆಕೃತಿ ಕ್ರಮೇಣ ತಮ್ಮತ್ತ ಬರುತ್ತಿರುವುದನ್ನು ಆತ ಗಮನಿಸಿ ದಳನಾಯಕನಿಗೆ ತೋರಿಸಿದ. ಅದು ಮೆಲ್ಲ ಮೆಲ್ಲನೆ ಚಲಿಸುತ್ತಾ ಮುಂದೆ ಬರುತ್ತಿದೆ. ಅತ್ತ ಇತ್ತ ತೂಗುತ್ತಿದ್ದ ಅದರ ತಲೆ ಮರಗಳ ಮೇಲೆ ಕಾಣಿಸಿತು. ಅದು ಮತ್ತಷ್ಟು ಮುಂದೆ ಬರುತ್ತಿರಲು ಅದರ ಭೀಕರ ರೂಪ ಸ್ಪಷ್ಟವಾಗಿ ಕಾಣಿಸಿತು. ತಾಳೆ ಮರದಂತೆ ಕಾಲುಗಳೂ, ಹೆಬ್ಬಾವಿನಂತಹಾ ಕೈಗಳೂ, ಬೆಂಕಿಯ ಗೋಳಗಳಂತೆ ಉರಿಯುತ್ತಿರುವ ಕಣ್ಣುಗಳು, ಹರಿತವಾದ ಅಗಲವಾದ ಹಲ್ಲುಗಳು, ಕೆಳಗೆ ಚಾಚಿರುವ ಕೆಂಪನೆಯ ರಕ್ತವನ್ನು ಸೋರುತ್ತಿರುವ ನಾಲಿಗೆ, ಕತ್ತಿಗಳಂತೆ ಮೊನಚಾಗಿರುವ ಉದ್ದನೆಯ ಉಗುರುಗಳು ವಿಕಾರ ಮುಖ ಇರುವ ಆ ರಾಕ್ಷಸೀ ಮೃಗದ ಭೀಕರ ರೂಪ ನೋಡಿ ಸೇನಾಧಿಪತಿಗೆ ಸಹಾ ಎದೆ ನಡುಗಿತು.

ಅದು ಒಂದೊಂದು ಅಡಿ ಇಟ್ಟು ಬರುತ್ತಿರುವಾಗ, ಅದರ ಅಡಿಯ ಭಾರಕ್ಕೆ ನೆಲ ನಡುಗಿತು. ಅದರ ಬಿಸಿ ಉಸಿರು ಸುಂಟರಗಾಳಿಯಂತೆ ಬೀಸುತ್ತಿತ್ತು. "ಈ ರಾಕ್ಷಸೀ ಮೃಗದ ಪಾದದಡಿಯಲ್ಲಿ ಗ್ರಾಮಗಳು, ಚಿಕ್ಕಪುಟ್ಟ ಮನೆಗಳು



ನೆಲಸಮವಾಗಿ ಹೋದದ್ದು ಆಶ್ಚರ್ಯವೇನಲ್ಲ. ಇದರ ಪಾದಗಳಿಗೆ ಸಿಲುಕಿದರೆ ನಗರವೇ ನುಚ್ಚುನೂರಾಗಿ ಹೋಗುತ್ತದೆ. ಅರಮನೆಗಳು ಮಣ್ಣಲ್ಲಿ ಮಣ್ಣಾಗಿ ಹೋಗುತ್ತವೆ. ಅದರಲ್ಲಿ ಸಂದೇಹವೇ ಇಲ್ಲ" ಎಂದು ಸೇನಾಧಿಪತಿ ಅಂದುಕೊಂಡನು.

ಆ ರಾಕ್ಷಸೀಮೃಗ ಮೆಲ್ಲಮೆಲ್ಲನೆ ಬರುವುದನ್ನು ನೋಡಿದ ಸೇನಾಧಿಪತಿ, ದಳನಾಯಕರು ಆ ರಾಕ್ಷಸೀ ಮೃಗದ ಮಾರ್ಗಕ್ಕೆ ಅಡ್ಡ ಬಾರದಂತೆ ಮೆಲ್ಲನೆ ಪಕ್ಕಕ್ಕೆ ಸರಿದು ಹೋದರು. ಅದೃಷ್ಟವಶದಿಂದ ಅವರ ಹಿಂದೆ ಬಂದ ಸೈನಿಕರೂ ಕೂಡ ಅದರ ಕಾಲ ಕೆಳಗೆ ಬೀಳದಂತೆ ತಪ್ಪಿಸಿಕೊಂಡರು. ಪೂರ್ವ ದಿಕ್ಕಿನಲ್ಲಿ ಅರುಣೋದಯದ ಕಿರಣ ಕಾಣುತ್ತಿರುವಾಗಲೇ ಆ ರಾಕ್ಷಸೀ ಮೃಗ ಸಮುದ್ರದ ಒಳಕ್ಕೆ ಇಳಿದು ನಡೆಯುತ್ತಾ ಹಾಗೆಯೇ ಕಣ್ಣಿನಿಂದ ಮರೆಯಾಯಿತು.



ಯಾರಿಗೂ ಸಾಧ್ಯವಿಲ್ಲದಿದ್ದುದರಿಂದ ತಮ್ಮ ಹಿಂದೆ ಬಂದ, ಮೂವರು ಸೈನಿಕರನ್ನು ರಾಜಧಾನಿ ನಗರಕ್ಕೆ ತಿರುಗಿ ಹೋಗುವಂತೆ ಆಜ್ಞಾಪಿಸಿದನು. ಕಾವಲು ಕಾಯಲು ಮೊದಲೇ ಅಲ್ಲಿಗೆ ಬಂದಿದ್ದ ಸೈನಿಕರ ಬಗ್ಗೆ ಯಾವ ಸುಳಿವೂ ತಿಳಿಯಲಿಲ್ಲ. ಅವರು ಆ ರಾಕ್ಷಸೀ ಮೃಗದ ಪಾದಗಳ ಕೆಳಗೆ ಬಿದ್ದು ಅಸು ನೀಗಿರಬೇಕೆಂದು ಸೇನಾಧಿಪತಿ ಗ್ರಹಿಸಿದನು.

"ಆ ರಾಕ್ಷಸೀ ಮೃಗವನ್ನು ಎದುರಿಸಿ ನಮ್ಮ ಪ್ರಾಣಗಳನ್ನು, ಸೈನಿಕರ ಪ್ರಾಣಗಳನ್ನು ಕಳೆದು ಕೊಳ್ಳುವುದು ವಿವೇಕವಲ್ಲ ಪ್ರಭೂ! ಅದ ಕ್ಕಿಂತಲೂ ಆ ರಾಕ್ಷಸೀಮೃಗ ರಾಜ್ಯದ ಒಳಗೆ ನುಗ್ಗಿ ಬಂದು ನಾಶ ಮಾಡದಂತೆ ಎಚ್ಚರಿಕೆ ವಹಿಸು ವುದೇ ಕ್ಷೇಮವೆಂದು ಭಾವಿಸುತ್ತೇನೆ'' ಎಂದನು ದಳನಾಯಕ.

"ಹೌದು! ಅದು ನಮ್ಮ ರಾಜ್ಯದಲ್ಲಿ ಅಡಿ ಇಡದಂತೆ ಮಾಡುವ ಯೋಜನೆಯನ್ನು ನಾವು ಆಲೋಚಿಸಬೇಕು. ಸಾಧ್ಯವಾದರೆ ಅದನ್ನು ವಧಿ ಸುವ ಪಥಕವನ್ನು ತಯಾರಿಸಬೇಕು. ನಾವು ಈಗಲೇ ರಾಜಧಾನಿಗೆ ಹೋಗಿ ಅರಸರಿಗೆ ವಿಷಯ ತಿಳಿಸಬೇಕು. ನೀನು ಈ ರಾತ್ರಿ ನಮ್ಮ ಭಟರನ್ನು ಯಾರನ್ನೂ ಕಾವಲಿಗೆ ಕಳುಹಿಸಬೇಡ. ನಾಳೆ ಸೂರ್ಯೋದಯದ ನಂತರ ನೀನು ಒಂದು ಬಾರಿ ಇಲ್ಲಿಗೆ ಬಂದು, ಆ ರಾಕ್ಷಸೀಮೃಗವು ಪುನಃ ಸಮುದ್ರದಿಂದ ಹೊರಗೆ ಬಂದಂತೆ ಅಡಿಜಾಡೆ ಗಳು ಏನಾದರೂ ಕಾಣುವುದೇ ಎಂದು ನೋಡಿ ಕೊಂಡು ಬಾ'' ಎಂದು ಹೇಳಿ ಸೇನಾಧಿಪತಿ ಗಂಭೀರಸಿಂಹನು ಕುದುರೆಯನ್ನು ಹತ್ತಿದ.

ಮತ್ತೊಂದು ಕುದುರೆಯ ಮೇಲೆ ದಳ ನಾಯಕನು ಹೊರಟ. ಇಬ್ಬರೂ ಶರವೇಗದಿಂದ

ಸೇನಾಧಿಪತಿಗೆ, ನಡೆಯುವ ಪರ್ವತದಂತೆ ಇರುವ ಆ ರಾಕ್ಷಸೀಮೃಗವನ್ನು ನೋಡುತ್ತಿದ್ದರೆ, ಮಾನವ ಮಾತ್ರರು ಯಾರೂ ಅದನ್ನು ಎದುರಿಸಿ ಗೆಲ್ಲಲು ಸಾಧ್ಯವಿಲ್ಲವೆಂದು ಅನಿಸಿತು. ಆ ವಿಚಿತ್ರ ಮೃಗ ಯಾವ ಅರ್ಧರಾತ್ರಿ ಸಮಯದಲ್ಲೋ ಹೊರಗೆ ಬಂದು, ಉತ್ತರ ದಿಕ್ಕಿಗೆ ಹೋಗಿ, ಸೂರ್ಯೋದಯದ ಸಮಯಕ್ಕೆ ಹಿಂತಿರುಗಿ ಸಮುದ್ರದಲ್ಲಿ ಸೇರಿಕೊಳ್ಳುತ್ತಿದೆ ಎಂಬ ವಿಷಯ ನಿಶ್ಚಯವಾಯಿತು. ಆದರೆ ಆ ಮೃಗವು ಯಾಕೆ ಆ ರೀತಿ ಸಮುದ್ರದಿಂದ ಹೊರಗೆ ಬಂದು, ಪುನಃ ಸೂರ್ಯೋದಯದ ಸಮಯಕ್ಕೆ ಪುನಃ ಸಮುದ್ರ ದೊಳಗೆ ಸೇರುತ್ತಿದೆ ಎಂಬುದು ಅವನಿಗೆ ಅರ್ಥ ವಾಗಲಿಲ್ಲ. ಆದರೆ ಅದನ್ನು ನಾಶ ಮಾಡದಿದ್ದರೆ ತಮ್ಮ ರಾಜ್ಯಕ್ಕೆ ಬಹಳ ಕಷ್ಟನಷ್ಟಗಳು ಸಂಭ ವಿಸುವುದು ಖಂಡಿತ. ಅದನ್ನು ಎದುರಿಸಲು

ಕುದುರೆಗಳನ್ನು ಓಡಿಸುತ್ತಾ ತ್ವರೆಯಲ್ಲಿ ರಾಜಧಾನೀ ನಗರವನ್ನು ಸೇರಿದರು.



ಸೇನಾಧಿಪತಿ ರಾಜಪ್ರಾಸಾದಕ್ಕೆ ತಲುಪಿದಾಗ ಅಲ್ಲಿ ರಾಜ ಪ್ರತಾಪವರ್ಮನು, ರಾಜಗುರುವಾದ ಗೌರೀನಾಥನೊಂದಿಗೆ ಚರ್ಚಿಸುತ್ತಿದ್ದ. ಆತ ಸೇನಾಧಿಪತಿಯನ್ನು ನೋಡಿದೊಡನೆ "ಆ ವಿಚಿತ್ರ ಪ್ರಾಣಿಯನ್ನು ನೋಡಿದೆಯಾ?'' ಎಂದು ಆತುರತೆಯಿಂದ ಕೇಳಿದನು.

"ನೋಡಿದೆ ಪ್ರಭೂ! ಸೈನಿಕರ ಮಾತಿನಲ್ಲಿ ಸ್ವಲ್ಪವೂ ಅತಿಶಯೋಕ್ತಿ ಇಲ್ಲ. ಅದು ರಾಕ್ಷಸೀ ಮೃಗವೇ'' ಎಂದು ಸೇನಾಧಿಪತಿ ತಾನು ದಕ್ಷಿಣ ಸಮುದ್ರ ತೀರದಲ್ಲಿ ನೋಡಿದ ದೃಶ್ಯವನ್ನು ವಿವರಿಸಿ "ಆ ರಾಕ್ಷಸೀ ಮೃಗ ಅರ್ಧರಾತ್ರಿ ಸಮಯದಲ್ಲಿ ಸಮುದ್ರದಿಂದ ಹೊರಗೆ ಬಂದು, ನೇರವಾಗಿ ಉತ್ತರ ದಿಕ್ಕಿಗೆ ಹೋಗಿ ಬೆಳಕು ಮೂಡುವುದರೊಳಗೆ ಮತ್ತೆ ಸಮುದ್ರಕ್ಕೆ ಸೇರುತ್ತದೆ. ಅದನ್ನು ಕೊಲ್ಲಬೇಕೆಂದು ಆಲೋಚಿಸಿದರೆ ಆ ಕೆಲಸವನ್ನು ಸಾಧಿಸುವಂತಹ ಶಕ್ತಿವಂತರು ನಮ್ಮಲ್ಲಿ ಯಾರೂ ಇಲ್ಲ'' ಎಂದು ಹೇಳಿದನು.

ಆ ಮಾತುಗಳನ್ನು ಕೇಳಿದ ರಾಜನು ಮೌನವಾಗಿ ಆಲೋಚಿಸಲು ಆರಂಭಿಸಿದ. 'ಇದ್ದಕ್ಕಿದ್ದಂತೆ ತನ್ನ ರಾಜ್ಯಕ್ಕೆ ಏಕೆ ಇಂಥಾ ಕ್ಲಿಷ್ಟ ಸ್ಥಿತಿ ಒದಗಿ ಬಂತು? ಲೈರಂಬಿ ಮಾತೆ ತನ್ನನ್ನು ಏಕೆ ಪರೀಕ್ಷೆ ಮಾಡುತ್ತಿದ್ದಾಳೆ? ಪ್ರಶಾಂತವಾಗಿದ್ದ ತನ್ನ ರಾಜ್ಯದಲ್ಲಿ ಇಂಥಾ ಭಯಾನಕ ಘಟನೆಗಳು ಏಕೆ ನಡೆಯುತ್ತಿದೆ? ಇದರ ಹಿನ್ನೆಲೆ ಏನಾಗಿರಬಹುದು? ಆ ರಾಕ್ಷಸೀ ಮೃಗ ತನ್ನ ರಾಜ್ಯದ ಪ್ರಜೆಗಳ ಪ್ರಾಣವನ್ನು, ಮನೆ ಮಠಗಳನ್ನು ತುಳಿದು ಧ್ವಂಸ ಮಾಡುತ್ತಿದೆ!' ಎಂದು ರಾಜನು ತನ್ನಲ್ಲಿ ತಾನೇ ತರ್ಕಿಸಿಕೊಳ್ಳುತ್ತಾ ರಾಜಗುರುವಿನತ್ತ ನೋಡಿದನು.

ಆಗ ರಾಜ ಗುರು "ಮಹಾರಾಜಾ! ಪೂಜಾರಿ ಕುಲಶ್ರೇಷ್ಠನ ಶಾಪಕ್ಕೆ ಗುರಿಯಾದ ಚಂದ್ರಕೇತನೇ ಈ ರಾಕ್ಷಸೀ ಮೃಗದ ರೂಪದಲ್ಲಿ ಅಲೆಯುತ್ತಿರಬಹುದೆಂದು ನನಗೆ ಅನುಮಾನ ಉಂಟಾಗುತ್ತಿದೆ. ಏಕೆಂದರೆ ತುಂಬಾ ಅಪರೂಪವಾಗಿ ಅರಳುವ "ಶತಾಬ್ಧಿಕೆ'' ಈಗ ನಮ್ಮ ರಾಜ್ಯಕ್ಕೆ ಈಶಾನ್ಯ ದಿಶೆಯಲ್ಲಿ ಅರ ಳಿದೆ. ಆ ವಿಚಿತ್ರ ಪುಷ್ಪಕ್ಕಾಗಿಯೇ ಚಂದ್ರಕೇತನು ಅಲ್ಲಿಗೆ ಆಕರ್ಷಿತನಾಗುತ್ತಿದ್ದಾನೆಂದು ನನಗೆ ತೋರುತ್ತದೆ. ಆದ್ದರಿಂದ ಪ್ರಸ್ತುತ ಸಮಯಕ್ಕೆ ಆ 'ಶತಾಬ್ಧಿ' ಪುಷ್ಪಗಳೇ ನಮ್ಮನ್ನು ಕಾಪಾಡಬೇಕು'' ಎಂದನು.

"ನಮಗೆ ಅನಿಷ್ಟದಾಯಕವೆಂದು ತಾವು ಅಪ್ಪಣೆ ಮಾಡಿದ್ದ ಆ ವಿಚಿತ್ರ ಪುಷ್ಪಗಳೇ ನಮ್ಮನ್ನು ಕಾಪಾಡುವುದೇ? ಅದು ಹೇಗೆ ಸಾಧ್ಯ

ವಾಗುತ್ತದೆ ಗುರುದೇವಾ'' ಎಂದನು ರಾಜ ಆಶ್ಚರ್ಯದಿಂದ.

"ಪೂಜಾರಿಯ ಶಾಪಕ್ಕೆ ಗುರಿಯಾಗಿ, ಈ ಭೂಮಿಯ ಮೇಲೆ ಸ್ಥಳವಿಲ್ಲದೆ ಹೋದ ಚಂದ್ರಕೇತನನ್ನು ಪ್ರಸ್ತುತದಲ್ಲಿ ಆ ವಿಚಿತ್ರ ಪುಷ್ಪಗಳೇ ಮಾಣಿಕ್ಯಪುರಿಯತ್ತ ಆಕರ್ಷಿಸುತ್ತಿದೆ. ಆ ವಿಚಿತ್ರ ಪುಷ್ಪಗಳನ್ನು ನಾವು ಆ ರಾಕ್ಷಸೀ ಮೃಗಕ್ಕೆ ಅಂದರೆ ಚಂದ್ರಕೇತನು ಇರುವ ಸಮುದ್ರಮಧ್ಯಕ್ಕೆ ಸೇರಿಸುವುದಾದರೆ ಆ ನರರೂಪ ರಾಕ್ಷಸನು ಇತ್ತ ಕಡೆ ಬರುವ ಅಪಾಯ ತಪ್ಪುವುದಲ್ಲವೇ? ಆದರೆ ಈ ಸಾಹಸ ಕಾರ್ಯ ಮಾಡಬಲ್ಲ ವೀರರು ಯಾರೆಂದು ನೋಡಬೇಕು'' ಎಂದನು ರಾಜಗುರು ಗೌರೀನಾಥ.

ಈ ಮಾತುಗಳಿಂದ ರಾಜನಿಗೆ ಶೃಂಗ್ಯಾಯ್ ಬೆಟ್ಟಗಳಲ್ಲಿ ನಿವಸಿಸುವ ಉತ್ತುಂಗ ಜಾತಿ ಪ್ರಜೆಗಳು ನೆನಪಿಗೆ ಬಂದರು. ವಸಂತೋತ್ಸವಕ್ಕೆ ಬಂದು ನಾನಾ ವಿಧವಾದ ಸ್ಪರ್ಧೆಗಳಲ್ಲಿ ಜಯಗಳಿಸಿದ ಉತ್ತಂಗನೆಂಬ ಯುವಕನು, ಅವನ ಮಿತ್ರರೂ ತನ್ನನ್ನು ಅಲ್ಲಿಗೆ ಆಹ್ವಾನಿಸಿದ ವಿಷಯ ರಾಜನ ಮನಸ್ಸಿಗೆ ತಟ್ಟನೆ ಹೊಳೆಯಿತು. ಆ ವಿಚಿತ್ರ ಪುಷ್ಪಗಳನ್ನು ಯುವರಾಣಿಗೆ ಕಾಣಿಕೆಯಾಗಿ ಕೊಟ್ಟವನು ಉತ್ತಂಗನೇ ಆದ್ದರಿಂದ ಅವನನ್ನು ಈ ವಿಷಯದಲ್ಲಿ ಉಪಯೋಗಿಸಿಕೊಳ್ಳುವುದು ಸರಿಯಾದ ಒಂದೇ ಮಾರ್ಗವೆಂದು ರಾಜನಿಗೆ ಕಂಡಿತು. ತಕ್ಷಣ ಅವನು ತಲೆದೂಗಿ, ಸೇನಾಧಿಪತಿಯನ್ನು ನೋಡಿ "ನಾನು ನಮ್ಮ ರಾಜ್ಯ ರಕ್ಷಣೆಗಾಗಿ ನಾಳೆಯೇ ಶೃಂಗ್ಯಾಯ್ ಬೆಟ್ಟಗಳಿಗೆ ಪ್ರಯಾಣ ಮಾಡುತ್ತೇನೆ. ನನ್ನ ಹಿಂದೆ ದಳ ನಾಯಕನಾದ ವೀರಸಿಂಹನು ಒಬ್ಬನು ಮಾತ್ರ ಬಂದರೆ ಸಾಕು'' ಎಂದು ರಾಜಗುರುವಿನ ಕಡೆ ತಿರುಗಿ "ನನ್ನ ಪ್ರಯಾಣ ವಿಜಯವಂತವಾಗಬೇಕೆಂದು ನನ್ನನ್ನು ಆಶೀರ್ವದಿಸಿ ಗುರುದೇವಾ'' ಎಂದು ನಮಸ್ಕರಿಸಿದ.

"ಬಹಳ ಉತ್ತಮವಾದ ನಿರ್ಣಯ ಮಾಡಿರುವೆ! ರಾಜ್ಯ ರಕ್ಷಣೆಗಾಗಿ ಪ್ರಾಣ ತ್ಯಾಗ ಮಾಡಲೂ ಸಿದ್ಧರಾಗಿರುವ ಸಾಹಸ ವೀರರು ಉತ್ತುಂಗ ಜಾತಿ ಪ್ರಜೆಗಳು. ನಿನಗೆ ಖಂಡಿತ ವಿಜಯ ಸಿದ್ಧಿಸುವುದು. ಲೈರಂಬಿ ಮಾತೆ ನಿನ್ನ ಸಂಗಡ ಇದ್ದು ನಿನ್ನನ್ನೂ, ನಿನ್ನ ಪ್ರಜೆಗಳನ್ನೂ ಕ್ಷೇಮದಿಂದ ರಕ್ಷಿಸಲಿ'' ಎಂದು ಆಶೀರ್ವದಿಸಿದನು ರಾಜಗುರು ಗೌರೀನಾಥ.

(ಇನ್ನೂ ಇದೆ)





# ವಿಚಿತ್ರಪುಷ್ಪ

೫

[ಸೇನಾಧಿಪತಿ ಗಂಭೀರಸಿಂಹನು ದಕ್ಷಿಣ ಸಮುದ್ರ ತೀರಕ್ಕೆ ಹೋಗಿ ತಿರುಗಿ ಬಂದು, ಆ ವಿಷಯವನ್ನು ರಾಜನಿಗೆ ತಿಳಿಸಿದನು. ಉತ್ತರ ಪ್ರಾಂತ್ಯದಲ್ಲಿ ಅರಳಿದ ಶತಾಬ್ದಿಕ ಪುಷ್ಪಗಳೇ ಸಮುದ್ರದಲ್ಲಿರುವ ರಾಕ್ಷಸ ಮೃಗವನ್ನು ಭೂಮಿಯ ಮೇಲೆ ಆಕರ್ಷಿಸುತ್ತಿದೆ ಎಂದು ರಾಜಗುರು ಹೇಳಿದನು. ಆ ವಿಷಯವಾಗಿ ಶೃಂಗ್ಯಾಮ್ ಬೆಟ್ಟಗಳಲ್ಲಿ ಇರುವ ಉತ್ತುಂಗ ಜಾತಿಯ ಯುವಕರ ಸಹಾಯ ಕೇಳಲು ಅಲ್ಲಿಗೆ ಹೊರಡಲು ರಾಜನು ನಿರ್ಣಯಿಸಿದನು. – ಆಮೇಲೆ]

ರಾಜ ಪ್ರತಾಪವರ್ಮನು ಬರುತ್ತಿರುವನೆಂದು ರಾಜ ಭಟರು ಬಂದು ತಿಳಿಸಿದೊಡನೆ ಉತ್ತುಂಗ ಪಂಗಡದ ನಾಯಕ ಶುಂಭನು ಅತಿ ಸಂತೋಷ ಭರಿತನಾದನು. ತಕ್ಷಣ ಹಟ್ಟಿಯಲ್ಲಿ ಎಲ್ಲಾ ಡಂಗುರ ಸಾರಿಸಿದನು. ಕ್ಷಣದಲ್ಲಿ ಪ್ರಜೆಗಳೆಲ್ಲರೂ ಹಟ್ಟಿಯ ಮುಂದಿರುವ ವಿಶಾಲವಾದ ಮೈದಾನದಲ್ಲಿ ಒಟ್ಟಿಗೆ ಸೇರಿದರು. ಅವರನ್ನು ನೋಡಿದ ಅವರ ನಾಯಕ ಶುಂಭನು "ನಮ್ಮ ಅರಸರು ಸ್ವಲ್ಪ ಸಮಯದಲ್ಲಿ ಇಲ್ಲಿಗೆ ಬರುತ್ತಿದ್ದಾರೆ. ಅವರಿಗೆ ನಾವೆಲ್ಲರೂ ಅತಿ ಘನವಾಗಿ ಸ್ವಾಗತ ಹೇಳಬೇಕು'' ಎಂದು ಎಚ್ಚರಿಸಿದನು.

ಆ ಮಾತುಗಳನ್ನು ಕೇಳಿ ಅಲ್ಲಿ ನೆರೆದಿದ್ದ ಜನರೆಲ್ಲರೂ ಮನೆಗಳಿಗೆ ಹೋಗಿ, ವಿಧವಿಧವಾದ ಬಣ್ಣದ ಉಡುಪುಗಳನ್ನು ಧರಿಸಿ, ಮತ್ತೆ ಅಲ್ಲಿಗೆ ಬಂದು ರಾಜನ ಆಗಮನಕ್ಕಾಗಿ ಉತ್ಸಾಹದಿಂದ ಎದುರು ನೋಡಲು ಆರಂಭಿಸಿದರು.

ಸ್ವಲ್ಪ ಸಮಯದ ನಂತರ ಅವರಿಗೆ ದೂರದಲ್ಲಿ ಕುದುರೆಗಳು ಬರುತ್ತಿರುವುದು ಕಾಣಿಸಿತು. ಮೊದಲು



ಬರುತ್ತಿರುವ, ಎರಡು ಕುದುರೆಗಳ ಮೇಲೆ ಇಬ್ಬರು ಸೈನಿಕರು ಧ್ವಜಗಳನ್ನು ಹಿಡಿದು ಬರುತ್ತಿದ್ದರು. ಅವರ ಹಿಂದೆ ಆಯುಧಗಳನ್ನು ಧರಿಸಿರುವ ನಾಲ್ಕು ಜನ ಸೈನಿಕರು, ಅವರಾದ ನಂತರ ರಾಜ, ಯುವ ರಾಣಿ, ಅವರ ಅಕ್ಕಪಕ್ಕಗಳಲ್ಲಿ ಇಬ್ಬರು ಅಂಗರಕ್ಷಕರು, ಅವರ ಹಿಂದೆ ದಳನಾಯಕ ಮತ್ತೆ ಮೂವರು ಅಂಗರಕ್ಷಕರು ಕುದುರೆಗಳ ಮೇಲೆ ಬರುತ್ತಿದ್ದರು.

ರಾಜ ಪರಿವಾರ ಅವರ ಸಮೀಪ ಬಂದೊಡನೆ, ಅಂಗರಕ್ಷಕರು ಮೊದಲು ಕುದುರೆಗಳಿಂದ ಇಳಿದರು. ಅವರು ರಾಜ ಹಾಗೂ ಯುವರಾಣಿ ಇರುವ ಕುದುರೆಗಳ ಬಳಿ ಹೋದರು. ಬೆಟ್ಟದ ಜಾತಿಯವರ ನಾಯಕ ಶುಂಭನು, ಕೈಗಳೆತ್ತಿ ರಾಜನಿಗೆ ನಮಸ್ಕಾರ ಮಾಡಿದನು. ರಾಜನು ಮಂದಹಾಸ ಬೀರುತ್ತಾ ಕುದುರೆಯ ಮೇಲಿಂದ ಕೆಳಗೆ ಇಳಿದು ಶುಂಭನನ್ನು ಆಪ್ಯಾಯತೆಯಿಂದ ಆಲಿಂಗಿಸಿಕೊಂಡು, ತನ್ನ ಮಗಳನ್ನು ತೋರಿಸುತ್ತಾ "ಇವಳು ನನ್ನ ಮಗಳು ಪ್ರಿಯಂವದ. ಈತನು ನಮ್ಮ ದಳ ನಾಯಕನಾದ ವೀರಸಿಂಹ" ಎಂದು ಇಬ್ಬರನ್ನೂ ಪರಿಚಯ ಮಾಡಿಸಿದನು.

ಶುಂಭನು, ಹತ್ತಿರದಲ್ಲಿರುವ ಮರದ ನೆರಳಿಗೆ ರಾಜನನ್ನು ಕರೆದುಕೊಂಡು ಹೋದನು. ಅಲ್ಲಿ ಬಿದಿರಿನಿಂದ ಮಾಡಿದ್ದ ಒಂದು ಆಸನ ಇತ್ತು. ಅದರ ಪಕ್ಕದಲ್ಲೇ ಇದ್ದ ಮತ್ತೊಂದು ಪುಟ್ಟ ಪೀಠದ ಮೇಲೆ ಯುವರಾಣಿಯನ್ನು ಕುಳಿತುಕೊಳ್ಳುವಂತೆ ಹೇಳಿ ರಾಜನು, ವಸ್ತ್ರವನ್ನು ಹೊದಿಸಿರುವ ಬಿದಿರು ಆಸನದ ಮೇಲೆ ಕುಳಿತುಕೊಂಡನು. ಆಗ ಬೆಟ್ಟದ ಜಾತಿಯವರ ನಾಯಕನು "ಮಹಾರಾಜಾ! ನಿಜವಾಗಿಯೂ ನಾವು ತುಂಬಾ ಭಾಗ್ಯಶಾಲಿಗಳು. ತಮ್ಮಂಥಾ ಮಹಾಪ್ರಭುಗಳು ನಮ್ಮಂಥಾ ದೀನ ಜನರನ್ನು ಅರಸುತ್ತಾ ಇಷ್ಟು ದೂರ ಬಂದಿದ್ದು ನೋಡಿ ನಮ್ಮೆಲ್ಲರಿಗೂ ಅತ್ಯಂತ ಆನಂದವಾಗಿದೆ. ತಮ್ಮನ್ನು, ಯುವರಾಣಿಯವರನ್ನು ನಮ್ಮ ನಡುವೆ ನೋಡಿದ ಈ ಮಹಾಭಾಗ್ಯದ ದಿನವನ್ನು ನಮ್ಮ ಮನಸ್ಸುಗಳಲ್ಲಿ ಭದ್ರವಾಗಿರಿಸಿಕೊಳ್ಳುತ್ತೇವೆ" ಎಂದು ಹೇಳಿದನು ಕಣ್ಣಿನಿಂದ ಆನಂದ ಭಾಷ್ಪಗಳನ್ನು ಸುರಿಸುತ್ತಾ.

ಅಷ್ಟರಲ್ಲಿ ಕೆಲವು ಯುವತಿಯರು, ತಟ್ಟೆಗಳಲ್ಲಿ ಏನೋ ಫಲಾಹಾರಗಳನ್ನು ತಂದು, ರಾಜರ ಮುಂದೆ, ಯುವರಾಣಿಯ ಮುಂದೆ, ಅನಂತರ ರಾಜ ಪರಿವಾರದವರ ಮುಂದೆ ಇಟ್ಟರು. ಎಲ್ಲರೂ ಅದನ್ನು ಭುಜಿಸುತ್ತಿರಲು, ಅತಿ ಶ್ರಾವ್ಯವಾಗಿ ತಮ್ಮಟೆಯ ಸದ್ದು ಕೇಳಿಸಿತು. ಆಮೇಲೆ ಕೆಲವು ಯುವತಿಯರು ಬಿದಿರು ಕೋಲುಗಳನ್ನು ತಂದು, ನೇರವಾಗಿ, ಅಡ್ಡವಾಗಿ ಹಿಡಿದುಕೊಂಡರು. ಅವರ ಹಿಂಬದಿಯಿಂದ ಕೇಳಿ ಬರುತ್ತಿರುವ ತಮ್ಮಟೆಯ ಸಂಗೀತಕ್ಕೆ ಸರಿ



ಹೊಂದುವಂತೆ, ಕೋಲುಗಳನ್ನು ಲಯಬದ್ಧವಾಗಿ ಕದಲಿಸುತ್ತಿದ್ದರೆ, ಅಂದವಾಗಿ ಅಲಂಕರಿಸಿಕೊಂಡಿದ್ದ ಇನ್ನಷ್ಟು ಮಂದಿ ಯುವತಿಯರು ಬಂದು, ಕೋಲುಗಳ ನಡುವೆ ಸೊಗಸಾಗಿ ನಾಟ್ಯವಾಡಲು ಆರಂಭಿಸಿದರು. ಆ ಬಿದಿರು ಕೋಲುಗಳ ನಾಟ್ಯವನ್ನು ನೋಡಿ ಯುವರಾಣಿ ಬಹಳ ಸಂತೋಷಿಸಿದಳು.

ನಾಟ್ಯ ಮುಗಿಯಿತು. ರಾಜನು ಆಸನದಿಂದ ಮೇಲೆದ್ದು ತಮ್ಮ ಸುತ್ತೂ ವಲಯಾಕಾರದಲ್ಲಿ ಸೇರಿರುವ ಅಲ್ಲಿಯ ಸ್ತ್ರೀ, ಪುರುಷರು ಹಾಗೂ ಮಕ್ಕಳನ್ನು ಒಮ್ಮೆ ನೋಡಿದನು. ಅವರೆಲ್ಲರೂ ಆನಂದದಿಂದ ಚಪ್ಪಾಳೆ ಹೊಡೆದರು. ಆಮೇಲೆ ರಾಜನು ಕೈಯನ್ನು ಮೇಲಕ್ಕೆ ಎತ್ತಿ ಹೀಗೆ ಹೇಳಿದನು. "ನೀವುಗಳು ನಮ್ಮ ಮೇಲೆ ತೋರುತ್ತಿರುವ ಗೌರವ, ಅಭಿಮಾನಗಳಿಗೆ, ಆನಂದದಿಂದ ಧನ್ಯವಾದಗಳನ್ನು ಅರ್ಪಿಸುತ್ತೇನೆ. ಕೆಲವು ದಿನಗಳ ಹಿಂದೆ ಇಲ್ಲಿಂದ ಕೆಲವರು ಯುವಕರು, ರಾಜಧಾನಿ ನಗರದಲ್ಲಿ ನಡೆದ ಕ್ರೀಡಾ ಸ್ಪರ್ಧೆಗಳಲ್ಲಿ ಭಾಗವಹಿಸಿ, ಬಹುಮಾನಗಳನ್ನು ಪಡೆದ ವಿಷಯ ನಮಗೆ ಎಷ್ಟೋ ಆನಂದದಾಯಕವಾಗಿತ್ತು. ಆ ಸಂದರ್ಭದಲ್ಲಿ ನಿಮ್ಮಲ್ಲಿ ಕೆಲವರಿಗೆ ಸೈನ್ಯದಲ್ಲಿ ಸ್ಥಳ ಕಲ್ಪಿಸಿಕೊಡುತ್ತೇನೆಂದು ಸಹಾ ಮಾತು ಕೊಟ್ಟಿದ್ದೆ. ಆ ಮಾತನ್ನು ನಾನು ಎಂದೂ ಉಳಿಸಿಕೊಳ್ಳುತ್ತೇನೆ. ಆದರೆ ಪ್ರಸ್ತುತದಲ್ಲಿ ನಾನು ಮತ್ತೊಂದು ಮುಖ್ಯವಾದ ಕಾರ್ಯದ ಮೇಲೆ ಬಂದಿದ್ದೇನೆ. ಈ ಪ್ರಾಂತ್ಯಕ್ಕೆ ಮಾತ್ರವಲ್ಲ, ಮಾಣಿಕ್ಯಪುರಿ ರಾಜ್ಯಕ್ಕೆ ಹಿಂದೆ ಎಂದೂ ಕಂಡು ಕೇಳದ ದೊಡ್ಡ ವಿಪತ್ತು ಸಂಭವಿಸಿದೆ. ಅದೇನೆಂದರೆ ನಮ್ಮ ದಕ್ಷಿಣ ಸಮುದ್ರದ ಮಧ್ಯಭಾಗದಿಂದ ಒಂದು ರಾಕ್ಷಸೀಮೃಗ, ಇಲ್ಲಿ ಬೆಟ್ಟಗಳಲ್ಲಿ ಅರಳಿರುವ ಶತಾಬ್ಧಿಕ ಪುಷ್ಪಗಳ ಪರಿಮಳದಿಂದ ಆಕರ್ಷಣೆಗೊಂಡು ಅರ್ಧರಾತ್ರಿ ಸಮಯದಲ್ಲಿ ಹೊರಗಡೆ ಬಂದು ಉತ್ತರ ದಿಕ್ಕಿನಲ್ಲಿ ಸ್ವಲ್ಪ ದೂರ ಪಯಣಿಸಿ, ಬೆಳಕು ಮೂಡುವ ಮುನ್ನ ಮತ್ತೆ ಸಮುದ್ರದ ಒಳಗೆ ಹೋಗಿ ಸೇರಿಕೊಳ್ಳುತ್ತಿದೆ. ಅದು ಹಾಗೆ ಬರುವುದರಿಂದ ಸಮುದ್ರ ತೀರದಲ್ಲಿರುವ ಮನೆಗಳು, ಮನುಷ್ಯರು, ದನಕರುಗಳು, ಹೊಲ, ಮರಗಳು ಎಲ್ಲವೂ ಅದರ ಪಾದದಡಿಯಲ್ಲಿ ಸಿಲುಕಿ ನೆಲಮಟ್ಟವಾಗಿ ನಾಶವಾಗಿ ಹೋಗುತ್ತಿದೆ. ಆ ಭೀಕರ ಮೃಗ, ಅದೃಷ್ಟದಿಂದ ನೀವು ವಾಸಿಸುತ್ತಿರುವ ಈ ಬೆಟ್ಟದ ಪ್ರಾಂತ್ಯಕ್ಕೆ ಇನ್ನು ಬರಲಿಲ್ಲ. ಅತಿ ಭಯಂಕರವಾದ ಆ ರಾಕ್ಷಸೀ ಮೃಗವನ್ನು ಎದುರಿಸಿ ಹೋರಾಡಲು ಮಾನವ ಮಾತ್ರರಿಂದ ಸಾಧ್ಯವಾಗದ ಕಾರ್ಯ. ಅದರಿಂದ ಆ ಮೃಗವು ನಮ್ಮ ರಾಜ್ಯದಲ್ಲಿ ಅಡಿ ಇಡದಂತೆ ಮಾಡಲು ರಾಜಗುರುಗಳ ಸಲಹೆಯ ಪ್ರಕಾರ ನಾನು ಒಂದು ಯೋಜನೆಯನ್ನು ರೂಪಿಸಿದ್ದೇನೆ. ರಾಕ್ಷಸೀ ಮೃಗ ಶತಾಬ್ಧಿಕ ಪುಷ್ಪಗಳ ಆಕ

ರ್ಷಣೆಯಿಂದ, ಉತ್ತರ ದಿಕ್ಕಿನಲ್ಲಿ ಬರುತ್ತಿರುವುದಾಗಿ ತಿಳಿಯುತ್ತಿದೆ. ಅದರಿಂದ ಅದು ಬರದಂತೆ ತಡೆಯ ಬೇಕಾದರೆ ಅದು ಇರುವ ಸ್ಥಳಕ್ಕೆ ಆ ಪುಷ್ಪಗಳನ್ನು ಸೇರಿಸಬೇಕು. ಇದು ಒಂದೇ ತಕ್ಕ ಉಪಾಯ. ಅದಕ್ಕೆ ನಿಮ್ಮೆಲ್ಲರ ಸಹಾಯ ಬೇಕು.''

ರಾಜನ ಮಾತು ಪೂರ್ತಿ ಆಗಿ ಕೆಲವು ಸಮಯ ಕಳೆಯಿತು. ಆದರೆ ಯಾರೂ ಬಾಯಿ ತೆರೆಯಲಿಲ್ಲ. ನಿಃಶಬ್ಧವನ್ನು ಭಂಗ ಮಾಡುತ್ತಾ ನಾಯಕನಾದ ಶುಂಭನು "ಮಹಾರಾಜಾ! ರಾಜ್ಯ ರಕ್ಷಣೆಗಾಗಿ ಪ್ರಾಣ ಅರ್ಪಿಸುವುದನ್ನು ಮಹಾಭಾಗ್ಯ ಎಂದು ಭಾವಿಸುತ್ತೇವೆ ನಾವು. ಆ ರಾಕ್ಷಸೀ ಮೃಗದ ಕಾರಣದಿಂದ ದೇಶಕ್ಕೆ ಸಂಭವಿಸುವ ಆಪತ್ತಿನಿಂದ ದೇಶವನ್ನು ರಕ್ಷಿಸಬೇಕಾದದ್ದು ನಮ್ಮ ಪ್ರಥಮ ಕರ್ತವ್ಯ. ಈ ದಿನ ಸಮುದ್ರ ತೀರಕ್ಕೆ ಬಂದ ಆಪತ್ತು, ನಾಳೆ ನಮ್ಮ ಈ ಬೆಟ್ಟದ ಪ್ರಾಂತ್ಯಕ್ಕೂ ಬರಬಹುದು. ಈ ವಿಷಯವನ್ನು ನಮಗೆ ತಿಳಿಸಿದ ನಿಮಗೆ ನನ್ನ ಕೃತಜ್ಞತೆಗಳನ್ನು ಅರ್ಪಿಸುತ್ತೇನೆ. ಈಗ ನಾವು ಏನು ಮಾಡಬೇಕು ಎಂದು ಆಜ್ಞಾಪಿಸಿ. ತಕ್ಷಣ ಅದನ್ನು ನೆರವೇರಿಸುತ್ತೇವೆ'' ಎಂದನು.

ನಾಯಕನ ಮಾತುಗಳನ್ನು ಅನುಮೋದಿಸು ವಂತೆ ಪ್ರಜೆಗಳು ಹರ್ಷದಿಂದ ಚಪ್ಪಾಳೆ ತಟ್ಟಿದರು. ಅಷ್ಟರಲ್ಲಿ ಜನಗಳ ಮಧ್ಯದಿಂದ ಒಬ್ಬ ಯುವಕನು ಮುಂದೆ ಬಂದು ರಾಜನಿಗೆ ನಮಸ್ಕರಿಸಿದನು.

ಅವನನ್ನು ನೋಡುತ್ತಲೇ ಯುವರಾಣಿ ಪ್ರಿಯಂ ವದೆ ರಾಜನೊಂದಿಗೆ "ವಿಚಿತ್ರ ಪುಷ್ಪಗಳನ್ನು ಕಾಣಿಕೆಯಾಗಿ ನೀಡಿದ್ದು ಈ ಯುವಕನೇ'' ಎಂದು ಮೆಲ್ಲನೆ ಹೇಳಿದಳು.

"ಹೌದು ಯುವರಾಣೀ! ಇಂಥಾ ವಿಪತ್ತನ್ನು ಹೊತ್ತು ಬರುವುದು ಎಂದು ತಿಳಿಯದೆ, ಆ ಶತಾಬ್ಧಿಕ ಪುಷ್ಪಗಳನ್ನು ನಿಮಗೆ ಕಾಣಿಕೆಯನ್ನಾಗಿ



ನೀಡಿದವನು ನಾನೇ'' ಎಂದು ಹೇಳಿ ರಾಜನತ್ತ ತಿರುಗಿ "ಈಗಲೇ ನಾನು ಶತಾಬ್ಧಿಕ ಹೂಗಳನ್ನು ತೆಗೆದುಕೊಂಡು ಆ ರಾಕ್ಷಸೀಮೃಗ ಇರುವ ಸ್ಥಳಕ್ಕೆ ಹೋಗುತ್ತೇನೆ. ಆಜ್ಞಾಪಿಸಿ ಮಹಾರಾಜಾ'' ಎಂದು ಹೇಳಿದನು ಆ ಯುವಕ.

"ಬಹಳ ಸಂತೋಷ ಉತ್ತುಂಗಾ! ಅದಕ್ಕಾಗಿ ಮೊದಲು ನೀನು ನಿನ್ನ ನಾಯಕನ ಅನುಮತಿಯನ್ನು ಪಡೆಯಬೇಕು'' ಎಂದು ಹೇಳಿದ ಮಹಾರಾಜ.

ಉತ್ತುಂಗನು ತಮ್ಮ ನಾಯಕನ ಕಡೆ ತಿರುಗಿ ನೋಡಿದ.

"ಶಭಾಷ್ ಉತ್ತುಂಗಾ! ನಿನ್ನ ಸಾಹಸಕ್ಕೆ ಮೆಚ್ಚಿದೆ. ಆದರೆ ಆ ರಾಕ್ಷಸೀ ಮೃಗವನ್ನು ಹೇಗೆ ಅಡ ಗಿಸಬೇಕೆಂದುಕೊಂಡಿರುವೆ'' ಎಂದು ಕೇಳಿದನು ಶುಂಭ ನಾಯಕ.

"ಅರಸರು ಅಪ್ಪಣೆ ಕೊಟ್ಟಂತೆ, ಶತಾಬ್ಧಿಕ



ಪುಷ್ಪಗಳನ್ನು ಕುಯಿದು, ಒಂದು ದೋಣಿಯಲ್ಲಿ ಹಾಕಿಕೊಂಡು ಆ ರಾಕ್ಷಸೀ ಮೃಗದ ಬೆನ್ನ ಹಿಂದೆ ಹೋಗಿ, ಅದರ ಸ್ಥಳದಲ್ಲಿ ಹೂಗಳನ್ನು ಹಾಕಿ ಬಿಡುತ್ತೇನೆ. ಅನಂತರ ಅದು ಮಾಣಿಕ್ಯಪುರಿಗೆ ಬರಬೇಕಾದ ಅವಶ್ಯಕತೆ ಇರುವುದಿಲ್ಲ ಅಲ್ಲವೇ?'' ಎಂದು ಉತ್ತರಿಸಿದ ಉತ್ತುಂಗ.

"ಚೆನ್ನಾಗಿದೆ ನೀನು ಹಾಗೆ ಹೋಗಿ ಮರಳಿ ಬರುವುದಕ್ಕೆ ಕೆಲವು ದಿನಗಳು ಆಗಬಹುದು. ಅದುವರೆಗೂ ನಿನ್ನ ಕುಟುಂಬವನ್ನು ಸಂರಕ್ಷಿಸುವ ಹೊಣೆಯನ್ನು ನಾವು ಸ್ವೀಕರಿಸುತ್ತೇವೆ'' ಎಂದನು ರಾಜ ಪ್ರತಾಪವರ್ಮ.

"ಉತ್ತುಂಗನಿಗೆ ದೊಡ್ಡ ಕುಟುಂಬವೆಂದು ಯಾರೂ ಇಲ್ಲ ಮಹಾರಾಜಾ! ಅವನ ಬಾಲ್ಯ ದಲ್ಲಿಯೇ ತಾಯಿ ತಂದೆಯರು ಮರಣಿಸಿದರು. ಒಬ್ಬಳೇ ಒಬ್ಬಳು ತಂಗಿ ಮಾತ್ರ ಇದ್ದಾಳೆ'' ಎಂದು ಹೇಳಿದನು ಶುಂಭ.

ಅಷ್ಟರಲ್ಲಿ ಜನರ ಮಧ್ಯದಿಂದ ಹದಿನೈದು ವರ್ಷಗಳ ಹುಡುಗಿ ಒಬ್ಬಳು ಕೈಯಲ್ಲಿ ಹೂಮಾಲೆ ಹಿಡಿದು ಮುಂದೆ ಬಂದಳು.

"ಇವಳು ನನ್ನ ತಂಗಿ ರಜನಿ'' ಎಂದು ಹೇಳಿ ದನು ಉತ್ತುಂಗ.

ರಜನಿ ಕೈಯಲ್ಲಿರುವ ಹೂಮಾಲೆಯನ್ನು ಯುವ ರಾಣಿಯ ಕೊರಳಿಗೆ ಹಾಕಿದಳು. ಸುತ್ತಲೂ ನೆರೆದಿದ್ದ ಜನ ಸಮೂಹ ಆನಂದದಿಂದ ಸಿಳ್ಳೆ ಹಾಕುತ್ತಾ, ಕೈ ತಟ್ಟಿದರು. ಯುವರಾಣಿ ಮೆಲ್ಲನೆ ನಕ್ಕು, ರಜನಿಯ ಕೈಯನ್ನು ಹಿಡಿದು, ಅವಳ ಗಲ್ಲ ಸವರಿ, ಉತ್ತುಂಗನ ಕಡೆ ತಿರುಗಿ "ನೀನು ಹೋಗಿ ತಿರುಗಿ ಬರುವ ವರೆಗೂ ನಿನ್ನ ತಂಗಿ ರಜನಿ ನಮ್ಮ ಅರಮನೆಯಲ್ಲಿರು ತ್ತಾಳೆ'' ಎಂದು ಹೇಳಿ, ರಜನಿಯನ್ನು ನೋಡಿ "ನಮ್ಮೊಂದಿಗೆ ಇರುವೆಯಲ್ಲವೇ?'' ಎಂದು ಕೇಳಿದಳು.

ರಜನಿ ನಾಚಿಕೆಯಿಂದ ತಲೆ ಬಗ್ಗಿಸಿ ಇರುತ್ತೇನೆ ಎಂಬಂತೆ ತಲೆ ತೂಗಿದಳು.

ಆಮೇಲೆ ರಾಜನು ಶುಂಭನೊಂದಿಗೆ "ಪ್ರಿಯಂ ವದೆಗೆ ಶತಾಬ್ಧಿಕ ಪುಷ್ಪಗಳೆಂದರೆ ಅತಿ ಪ್ರೀತಿ ಉಂಟಾಗಿದೆ. ಅವುಗಳನ್ನು ರಾಜೋದ್ಯಾನದಲ್ಲಿ ಬೆಳೆಸಬೇಕೆಂದು ಸಹಾ ಆಶಿಸಿದಳು. ಆದರೆ ಅವು ಶಾಪಗ್ರಸ್ತ ಹೂಗಳೆಂದು ರಾಜಗುರು ಎಚ್ಚರಿಕೆ ಮಾಡಿದ್ದರಿಂದ, ಆ ಆಸೆಯನ್ನು ತೊರೆದು ಬಿಟ್ಟಳು. ಆ ಹೂಗಳನ್ನು ಕಣ್ಣು ತುಂಬ ಕಾಣಬೇಕೆಂಬ ಮಹದಾಸೆಯಿಂದ ನನ್ನೊಂದಿಗೆ ಹೊರಟು ಬಂದಿ ದ್ದಾಳೆ. ಆ ಹೂಗಳನ್ನು ದೂರದಿಂದ ನೋಡಲು ಸಾಧ್ಯವಾಗಬಹುದೇ?'' ಎಂದು ಕೇಳಿದನು.

"ನೋಡಬಹುದು. ಅದರಲ್ಲಿ ಏನೂ ಕಷ್ಟವಿಲ್ಲ ಮಹಾರಾಜಾ'' ಎಂದು ಹೇಳಿದ ಶುಂಭನಾಯಕ.

"ತಾವು ಅನುಮತಿ ನೀಡಿದರೆ, ನಾನೇ ಯುವ ರಾಣಿ ಅವರನ್ನು ಕರೆದುಕೊಂಡು ಹೋಗಿ, ಆ ಹೂಗಳನ್ನು ತೋರಿಸುತ್ತೇನೆ. ಕುದುರೆಗಳ ಮೇಲೆ ಹೋದರೆ ಬೇಗ ತಿರುಗಿ ಬರಬಹುದು'' ಎಂದನು ಉತ್ತುಂಗ.

"ಸರಿ! ಈಗಲೇ ಹೊರಟು, ಬೇಗ ಹೋಗಿ ಬನ್ನಿ. ನಾನು ಇಲ್ಲಿಯೇ ಇರುತ್ತೇನೆ. ನಿಮ್ಮೊಂದಿಗೆ ಅಂಗರಕ್ಷಕರನ್ನು ಕರೆದುಕೊಂಡು ಹೋಗಿ'' ಎಂದು ರಾಜನು ಯುವರಾಣಿಯೊಂದಿಗೆ ಹೇಳಿ, ಶುಂಭನ ಕಡೆ ನೋಡಿ "ನಡೆ! ನಾನು ನಿಮ್ಮ ಹಟ್ಟಿಗಳನ್ನು ನೋಡಲು ಬಯಸುತ್ತೇನೆ'' ಎಂದನು.

ಯುವರಾಣಿ, ಉತ್ತುಂಗನು ಒಂದೊಂದು ಕುದುರೆಯನ್ನು ಹತ್ತಿ ಹೊರಟರು. ಅವರ ಹಿಂದೆ ಅಂಗರಕ್ಷಕರೂ ಹೊರಟರು. ಅವರೆಲ್ಲರೂ ಶತಾಬ್ಧಿಕ ಹೂವುಗಳು ಅರಳಿರುವ ಬೆಟ್ಟದ ಕಡೆ ಬಹು ದೂರ ಪ್ರಯಾಣ ಮಾಡಿ ಒಂದು ಇಕ್ಕಟ್ಟಾದ ಮಾರ್ಗಕ್ಕೆ ಬಂದು ಸೇರಿದರು. ಆಗ ಉತ್ತುಂಗನು "ಯುವರಾಣೀ ಇಲ್ಲಿಂದ ನೀವು ಜಾಗರೂಕತೆಯಿಂದ, ನಿಧಾನದಿಂದ ಕುದುರೆಯನ್ನು ನಡೆಸಬೇಕು. ಮಾರ್ಗದ ಎರಡೂ ಕಡೆ ಇರುವ ಮರಗಳ ಕೊಂಬೆಗಳು ಬಹಳ ಕೆಳಗೆ ಬಾಗಿ ಇವೆ'' ಎಂದು ಎಚ್ಚರಿಸಿದನು.

ಹಾಗೆ ಸ್ವಲ್ಪ ದೂರ ಹೋದ ನಂತರ "ಅದೋ! ಅಲ್ಲಿ ನೋಡಿ! ಆಕಾಶವನ್ನು ಸೋಕುತ್ತಿರುವ ಮರಗಳಲ್ಲಿ ಅರಳಿರುವ ಮಿಂಚಿನ ಹೂವುಗಳನ್ನು. ಅವೇ ಶತಾಬ್ಧಿಕ ಪುಷ್ಪಗಳು'' ಎಂದನು ಉತ್ತುಂಗ.

ಅದ್ಭುತವಾದ ಆ ದೃಶ್ಯವನ್ನು ನೋಡಿ ಮೈ ಮರೆತು ಹೋದಳು ಯುವರಾಣಿ. ಬೆಟ್ಟಗಳ ಮೇಲೆ ಬಿದಿರು ಪೊದೆಗಳಂತೆ ಇರುವ ಮರಗಳ ಮೇಲೆ ಕಣ್ಣು ಕೋರೈಸುವಂತೆ ಮಿಂಚುತ್ತಿದ್ದ ಆ



ಕೆಂಪು ಹೂಗಳನ್ನು ನೋಡಿದ ಅವಳು "ಇನ್ನು ಸ್ವಲ್ಪ ಮುಂದಕ್ಕೆ ಹೋಗೋಣವೇ?'' ಎಂದು ಕೇಳಿದಳು.

"ಬೇಡ ಯುವರಾಣೀ, ಕುದುರೆಗಳು ಇನ್ನು ಮುಂದಕ್ಕೆ ಹೋಗಲು ಸಾಧ್ಯವಿಲ್ಲ. ನಡೆದುಕೊಂಡು ಹೋಗುವುದು ಅತ್ಯಂತ ಪ್ರಯಾಸದ ಕಾರ್ಯ'' ಎಂದನು ಉತ್ತುಂಗ.

ಯುವರಾಣಿ ಹೂಗಳನ್ನು ನೋಡುತ್ತಾ ಹಾಗೆಯೇ ಅಚೇತನಳಾಗಿ ನಿಂತುಬಿಟ್ಟಳು. ಸ್ವಲ್ಪ ಸಮಯದ ನಂತರ ಉತ್ತುಂಗನು "ಇನ್ನು ಹೊರಡೋಣವೇ ಯುವರಾಣಿ'' ಎಂದನು.

"ಸುಂದರವಾದ ಈ ಸುಕುಮಾರ ಪುಷ್ಪಗಳು ಶಾಪಕ್ಕೆ ಗುರಿಯಾಗಿರುವುದು ಶೋಚನೀಯ ಮತ್ತು ದುರದೃಷ್ಟಕರ. ಆದರೂ ಮತ್ತೇನಾದರೂ ಅದ್ಭುತ ನಡೆದು, ಆ ಶಾಪ ವಿಮೋಚನೆ ಆಗುವುದೆಂದು

ಅಂದುಕೊಳ್ಳುತ್ತೇನೆ'' ಎಂದು ಅವಳು ಆ ದೃಶ್ಯವನ್ನು ಮತ್ತೊಮ್ಮೆ ಕಣ್ಣು ತುಂಬಾ ನೋಡಿ, ಕುದುರೆಯನ್ನು ಹಿಂದಕ್ಕೆ ಹೊರಳಿಸಿದಳು.

ಅಮು ಮರಳಿ ಬಂದಾಗ ರಾಜನು ಪ್ರಯಾಣಕ್ಕೆ ಸಿದ್ಧನಾಗಿ ನಿಂತಿದ್ದನು. ತಂದೆಯನ್ನು ಕಂಡೊಡನೆ, ಅವಳು "ಬಹಳ ಅದ್ಭುತವಾದ ದೃಶ್ಯವನ್ನು ನೋಡಿದೆ ಅಪ್ಪಾ! ಆ ಪುಷ್ಪಗಳನ್ನು ಶೇಖರಿಸುವುದು ಬಹಳ ಕಷ್ಟದಾಯಕವಾದ ಕೆಲಸ ಎಂದು ತೋರುತ್ತದೆ'' ಎಂದಳು.

"ಕಷ್ಟದಾಯಕವಾದ ಕೆಲಸಗಳನ್ನು ಮಾಡುವುದೆಂದರೆ ನಮಗೆ ಇಷ್ಟ ಯುವರಾಣಿ!'' ಎಂದನು ಶುಂಭ.

ರಾಜನು ಉತ್ತುಂಗನನ್ನು ಹತ್ತಿರ ಕರೆದು "ನಿನ್ನ ಕಾರ್ಯವು ವಿಜಯ ಗಳಿಸಲೆಂದು ಆಶಿಸುತ್ತಿದ್ದೇನೆ. ನಿನ್ನ ಬರುವಿಕೆಗಾಗಿ ನಾನು ಮಾತ್ರ ಅಲ್ಲ, ನಮ್ಮ ರಾಜ್ಯದ ಪ್ರಜೆಗಳೆಲ್ಲರೂ ಕಾತುರತೆಯಿಂದ ಕಾದಿರುತ್ತಾರೆ. ದೇಶಕ್ಷೇಮಕ್ಕಾಗಿ, ಶಾಂತಿಗಾಗಿ, ನೀನು ಮಾಡುತ್ತಿರುವ ಸಾಹಸ ಪ್ರಶಂಸನೀಯವಾಗಿದೆ'' ಎಂದು ಹೇಳಿ ಶುಂಭನ ಕಡೆ ತಿರುಗಿ "ಉತ್ತುಂಗನು ಹೊರಟ ನಂತರ, ಅವನ ತಂಗಿ ರಜನಿಯನ್ನು ರಾಜ ಪ್ರಾಸಾದಕ್ಕೆ ಕರೆದುಕೊಂಡು ಬನ್ನಿ'' ಎಂದು ಹೇಳಿ ಆಸನದಿಂದ ಎದ್ದು ಮುಂದೆ ನಡೆದನು.

ಯುವರಾಣಿ, ರಜನಿಯ ಭುಜದ ಮೇಲೆ ಕೈ ಹಾಕಿ, ಆತ್ಮೀಯತೆಯಿಂದ ಅವಳ ಕೈಯನ್ನು ಸ್ಪರ್ಶಿಸಿ, ನಂತರ ಕುದುರೆಯನ್ನು ಏರಿದಳು. ಆಮೇಲೆ ರಾಜನು ಕುದುರೆಯನ್ನು ಅಧಿರೋಹಿಸಿದನು. ಆತನ ಹಿಂದೆ ದಳನಾಯಕನು, ಅನಂತರ ಅಂಗರಕ್ಷಕರು ಕುದುರೆಗಳನ್ನು ಹತ್ತಿದರು.

ಶುಂಭನು ಕೈ ಜೋಡಿಸಿ, ರಾಜನಿಗೆ ನಮಸ್ಕಾರ ಮಾಡುತ್ತಾ ಬೀಳ್ಕೊಟ್ಟನು. ಪರಿವಾರದೊಂದಿಗೆ ರಾಜನು ಪಯಣವನ್ನು ಆರಂಭಿಸಿದನು.

ಅದಾದ ನಂತರ ಶುಂಭನು, ಉತ್ತುಂಗನ ಭುಜವನ್ನು ಆಪ್ಯಾಯತೆಯಿಂದ ಹಿಡಿದು, ತಮ್ಮ ಹಟ್ಟಿಗಳತ್ತ ನಡೆಯುತ್ತಾ "ಮಗೂ ಉತ್ತುಂಗಾ! ನಿನ್ನ ಸಾಹಸ ಮೆಚ್ಚತಕ್ಕದ್ದು. ನಿನ್ನಿಂದ ನಮ್ಮ ಉತ್ತುಂಗ ವಂಶಕ್ಕೆ ಚಿರಕೀರ್ತಿ ಲಭಿಸುವುದು. ನೀನು ಸಾಧಿಸಬೇಕಾದ ಕಾರ್ಯ ಅಪಾಯ ತುಂಬಿದ ಕಾರ್ಯ. ಆದರೆ ಜಗನ್ಮಾತೆಯ ಕೃಪಾಕಟಾಕ್ಷದಿಂದ ನೀನು ವಿಜಯ ಹೊಂದಿ ಕ್ಷೇಮವಾಗಿ ಹಿಂತಿರುಗಿ ಬರುವೆ. ನನಗೆ ಆ ನಂಬಿಕೆ ಇದೆ'' ಎಂದನು ಎಷ್ಟೋ ಆನಂದದಿಂದ.

(ಇನ್ನೂ ಇದೆ)





# ವಿಚಿತ್ರ ಪುಷ್ಪ

೬

[ಮಾಹಿಷ್ಮಪುರಿ ರಾಜ್ಯವನ್ನು ರಾಕ್ಷಸೀ ಮೃಗದಿಂದ ಪಾರು ಮಾಡಲು, ಪ್ರತಾಪವರ್ಮನು ಬೆಟ್ಟದ ಜಾತಿ ಯುವಕನ ಸಹಾಯ ಕೇಳಲು ಶೃಂಗ್ಯಾಯ್ ಬೆಟ್ಟಕ್ಕೆ ಹೋದನು. ಯುವರಾಣಿಯೊಂದಿಗೆ ಬಂದ ರಾಜನನ್ನು ನೋಡಿ ಅಲ್ಲಿಯ ಪ್ರಜೆಗಳೂ ಅವರ ನಾಯಕನೂ ಅಮಿತಾನಂದ ಹೊಂದಿದರು. ಉತ್ತುಂಗನು ರಾಜನ ಆಜ್ಞೆಯನ್ನು ನೆರವೇರಿಸುವುದಾಗಿ ಮಾತು ಕೊಟ್ಟನು. ಯುವರಾಣಿ ಶತಾಬ್ದಿಕ ಪುಷ್ಪಗಳನ್ನು ನೋಡಿ ಬಂದಳು. ರಾಜನು ಸಂತೋಷದಿಂದ ರಾಜಧಾನಿಗೆ ಮರಳಿದನು.. ಆಮೇಲೆ]

ರಾಜ ಪ್ರತಾಪವರ್ಮನು ಯುವರಾಣಿಯೊಂದಿಗೆ ತಮ್ಮ ನಿವಾಸಕ್ಕೆ ಬಂದಿದ್ದನ್ನು ನೆನೆದು ಉತ್ತುಂಗ ಜಾತಿ ಪ್ರಜೆಗಳು ಆನಂದದಿಂದ ಉಬ್ಬಿಹೋದರು. ರಾಜನು ತಮ್ಮ ಸಹಾಯವನ್ನು ಕೇಳಿದ್ದು, ರಾಜ್ಯಕ್ಕೆ ಬಂದಿರುವ ಆಪತ್ತನ್ನು ತಡೆಯಲು ತಮ್ಮ ಜಾತಿ ಯುವಕನಾದ ಉತ್ತುಂಗನು ಹೊರಡುತ್ತೇನೆ ಎಂದು ಹೇಳಿದ್ದು ಅವರಿಗೆ ಬಹಳ ಆನಂದವನ್ನು ಉಂಟು ಮಾಡಿತು. ಉತ್ತುಂಗನು ತನ್ನ ಪ್ರಯತ್ನದಲ್ಲಿ ವಿಜಯವನ್ನು ಸಾಧಿಸಲೆಂದು ಅಲ್ಲಿಯ ಪ್ರಜೆಗಳು ತಮ್ಮ ಕುಲದೇವತೆಯನ್ನು ಪ್ರಾರ್ಥಿಸಿದರು. ಆ ಯುವಕನ ಗೌರವಾರ್ಥವಾಗಿ ಆ ದಿನ ಸಾಯಂಕಾಲ ಔತಣಕ್ಕೆ ಏರ್ಪಾಡು ಮಾಡಿದರು,

ಹಿರಿಯರು, ಕಿರಿಯರು, ಹಟ್ಟಿಗೆ ಸಮೀಪ ದಲ್ಲಿರುವ ಒಂದು ವಿಶಾಲ ಪ್ರದೇಶದಲ್ಲಿ ಗುಂಪು ಕೂಡಿದರು. ಅವರ ನಾಯಕ ಶುಂಭನು ಇತರ ಕುಲಗಳ ಹಿರಿಯರು, ಕುಳಿತಿರುವ ಸ್ಥಳಕ್ಕೆ ಪಕ್ಕದಲ್ಲೇ ಉತ್ತುಂಗನಿಗೆ ಉನ್ನತ ಆಸನವನ್ನು ಹಾಕಿದರು. ಔತಣ ಉಣ್ಣುತ್ತಾ ಕುಲಹಿರಿಯರು, ಉತ್ತುಂಗನು



ರಾಕ್ಷಸೀ ಮೃಗವನ್ನು ಹೇಗೆ ಎದುರಿಸಿದರೆ ಅವನ ಕಾರ್ಯ ಸುಲಭವಾಗಿ ಆಗುವುದೆಂದು ದೀರ್ಘವಾಗಿ ಆಲೋಚಿಸಿ ಚರ್ಚಿಸಿದರು.

ಅವರ ಚರ್ಚೆಗಳು, ಊಟ ಮುಗಿದ ಮೇಲೆ ಶುಂಭನು ಎದ್ದು ನಿಂತು "ಶತಾಬ್ಧಿಕ ಹೂವುಗಳು ಅರಳಿರುವ ಸ್ಥಳ ನಮ್ಮ ಉತ್ತುಂಗನಿಗೆ ಗೊತ್ತು. ಅದರಿಂದ ನಾಳೆ ಬೆಳಕು ಮೂಡುತ್ತಲೇ ಅವನೊಂದಿಗೆ ಆರು ಜನ ಯುವಕರು ಹೋಗಿ ಆ ಹೂಗಳನ್ನು ಶೇಖರಿಸಬೇಕು. ರಾತ್ರಿ ಸಮಯದಲ್ಲಿ ರಾಕ್ಷಸೀ ಮೃಗವು ಬರುವ ಅಪಾಯವು ಇರುವುದರಿಂದ ಹೊತ್ತು ಮುಳುಗುವುದರೊಳಗೆ ಆ ಕೆಲಸವನ್ನು ಪೂರ್ತಿ ಮಾಡಬೇಕು. ಕುಯ್ದ ಹೂವುಗಳನ್ನು ಕಂತೆಗಳಾಗಿ ಕಟ್ಟಿ ಒಂದು ಕಡೆ ಭದ್ರಪಡಿಸಿ ರಾತ್ರಿ ಹಟ್ಟಿ ಸೇರಿಕೊಳ್ಳಬೇಕು" ಎಂದು ಸ್ವಲ್ಪ ತಡೆದು "ಆ ಹೂವುಗಳನ್ನು ಸಮುದ್ರ ಮಧ್ಯಕ್ಕೆ ಸೇರಿಸಬೇಕಾದರೆ ಒಂದು ದೋಣಿ ಬೇಕು. ಸಮುದ್ರ ತೀರದ ಪ್ರಾಂತ್ಯ ನಾಶವಾದ ಕಾರಣ ಅಲ್ಲಿ ದೋಣಿಗಳು ಸಿಗುವ ಅವಕಾಶ ಇಲ್ಲ. ಅದರಿಂದ ನಾವೇ ಇಲ್ಲಿ ಒಂದು ದೋಣಿಯನ್ನು ತಯಾರು ಮಾಡಿಕೊಳ್ಳಬೇಕು. ನಿಮ್ಮಲ್ಲಿ ಯಾರಿಗಾದರೂ ದೋಣಿಯನ್ನು ತಯಾರಿಸುವುದು ಹೇಗೆಂಬುದು ತಿಳಿದಿದೆಯೇ?" ಎಂದು ಕೇಳಿದ.

ಜನರ ನಡುವಿನಿಂದ ಇಬ್ಬರು ಮುಂದಕ್ಕೆ ಬಂದು "ನಾವು ಕೆಲವು ದಿನ ಸಮುದ್ರ ತೀರದ ಗ್ರಾಮಗಳಲ್ಲಿ ಇದ್ದು ಬಂದಿದ್ದೇವೆ. ಆಗ ನಾವು ದೋಣಿ ತಯಾರಿಸುವ ಪದ್ಧತಿಯನ್ನು ಕಲಿತುಕೊಂಡಿದ್ದೇವೆ. ನಾವು ದೋಣಿಯನ್ನು ತಯಾರಿಸುತ್ತೇವೆ" ಎಂದರು.

"ಎಷ್ಟು ದಿನಗಳಲ್ಲಿ ಸಿದ್ಧ ಮಾಡಬಲ್ಲಿರಿ?" ಎಂದು ಕೇಳಿದನು ನಾಯಕ.

"ಎರಡು ದಿನಗಳಲ್ಲಿ ಸಿದ್ಧ ಮಾಡಬಲ್ಲೆವು ಪ್ರಭೂ" ಎಂದರು ಅವರು.

"ಬಹಳ ಸಂತೋಷ" ಎಂದು ನಾಯಕನು ಜನರತ್ತ ನೋಡಿ "ನಾಳೆ ಬೆಳಿಗ್ಗೆ ಉತ್ತುಂಗನೊಂದಿಗೆ, ಹೂವುಗಳನ್ನು ಸಂಗ್ರಹಿಸಲು ಯಾರು ಹೋಗುತ್ತಿದ್ದಾರೆ?" ಎಂದು ಕೇಳಿದನು.

ತಕ್ಷಣ ನಾನು ನಾನೆಂದು ಯುವಕರೆಲ್ಲರೂ ಕೈ ಎತ್ತಿದರು.

"ನಿಮ್ಮ ಉತ್ಸಾಹ ಕಂಡು ಆನಂದವಾಯಿತು. ಆದರೂ ಇಷ್ಟು ಜನ ಬೇಕಾಗಿಲ್ಲ. ಆರು ಜನ ಬಂದರೆ ಸಾಕು" ಎಂದು ಉತ್ತುಂಗನು ಅವರಲ್ಲಿ ಆರು ಜನರನ್ನು ಆರಿಸಿಕೊಂಡು ಪಕ್ಕಕ್ಕೆ ಕರೆದನು.

ಆಮೇಲೆ ಉತ್ತುಂಗನು, ನಾಯಕನೊಂದಿಗೆ ಅಲ್ಲಿ ಸೇರಿರುವ ಹಿರಿಯರಿಗೆ ಕೈ ಎತ್ತಿ ನಮಸ್ಕಾರ ಮಾಡಿ ಅವರ ಆಶೀರ್ವಾದಗಳನ್ನು ಪಡೆದನು.

ನಾಯಕ ಕುಂಭನು ಅಪ್ಯಾಯತೆಯಿಂದ ಉತ್ತುಂಗನ ಭುಜವನ್ನು ತಟ್ಟಿದನು. ಉತ್ತುಂಗನು ನಗುತ್ತಾ ತಂಗಿ ರಜನಿಯನ್ನು ಕರೆದುಕೊಂಡು ತನ್ನ ಗುಡಿಸಲಿಗೆ ಹೋದನು.

ಮರುದಿನ ಮುಂಜಾನೆ ಉತ್ತುಂಗನು, ಆರು ಜನ ಮಿತ್ರರನ್ನು ಕರೆದುಕೊಂಡು ಶತಾಬ್ಧಿಕ ಹೂವುಗಳನ್ನು ಅರಳಿರುವ ಬೆಟ್ಟಗಳ ಕಡೆ ಹೊರಟನು. ಸ್ವಲ್ಪ ಹೊತ್ತಾದ ನಂತರ ಅವರು ಆ ಮರಗಳಿದ್ದ ಬೆಟ್ಟವನ್ನು ಸೇರಿ, ಹೂಗಳು ಇರುವ ಮರವನ್ನು ಕೊಡಲಿಗಳಿಂದ ಹೊಡೆದು ಬುಡ ಸಮೇತ ಬೀಳಿಸಿದರು. ಕೆಳಗೆ ಬಿದ್ದ ಒಂದೊಂದು ಮರದ ತುಟ್ಟ ತುದಿಯ ಕೊಂಬೆಯಲ್ಲಿ ಇರುವ ಹೂಗಳನ್ನು ಕುಯಿದು, ಕಟ್ಟು ಕಟ್ಟಾಗಿ ಕಟ್ಟಲು ಆರಂಭಿಸಿದರು. ಸಂಜೆಯ ಒಳಗೆ ಎಲ್ಲ ಹೂವುಗಳನ್ನೂ ಕುಯಿದು ಕಟ್ಟಾಗಿ ಕಟ್ಟಿದರು. ಉತ್ತುಂಗನು ಅಲ್ಲಿ ಕಾಣಿಸಿದ, ಎರಡು ಎಳೆಯ ಸಸಿಗಳನ್ನು, ಹೂವಿನ ಕಟ್ಟನೊಂದಿಗೆ ಕಟ್ಟಿ, ಆ ಕಂತೆಗಳನ್ನು ಒಂದು ದೊಡ್ಡ ಗಾಡಿಯ ಹಿಂದೆ ಭದ್ರ ಮಾಡಿದನು. ಸೂರ್ಯನು ಅಸ್ತಮಿಸುತ್ತಿರಲು ಏಳು ಜನ ಮಿತ್ರರು ಸಂತೋಷವಾಗಿ ಹಟ್ಟಿಗೆ ಹಿಂತಿರುಗಿದರು.

ಅವರು ಹಟ್ಟಿಯನ್ನು ಸಮೀಪಿಸುತ್ತಿರುವಾಗ ನಾಯಕನು ಎದುರಿಗೆ ಬಂದು, "ನೀವು ಹೋದ ಕೆಲಸ ಪೂರ್ತಿ ಆಯಿತಲ್ಲವೇ?'' ಎಂದು ಕೇಳಿದನು.

"ಆಯಿತು'' ಎಂದನು ಉತ್ತುಂಗನು ನಗುತ್ತಾ.

"ನಾಳೆ ಸಾಯಂಕಾಲಕ್ಕೆ ದೋಣಿ ಸಿದ್ಧವಾಗುತ್ತದೆ. ನಾಡಿದ್ದು ಮುಂಜಾನೆ ನಾವು ಸಮುದ್ರ ತೀರಕ್ಕೆ ಹೊರಡಬಹುದು'' ಎಂದನು ನಾಯಕನು ಬಳಿಯಲ್ಲಿ ಇದ್ದ ದೋಣಿಯನ್ನು ಅವರಿಗೆ ತೋರಿಸುತ್ತಾ.

ಆಮೇಲೆ ಆತನು ಉತ್ತುಂಗನೊಂದಿಗೆ "ನೀವು ತುಂಬ ಬಳಲಿ ಬಂದಿರುವಿರಿ. ಹೋಗಿ ನಿದ್ದೆ ಮಾಡಿ. ಈ ರಾತ್ರಿಗೆ ನಾನು ಬೇರೆ ಕೆಲವರನ್ನು ಹಟ್ಟಿಗೆ ಕಾವಲಿಡುತ್ತೇನೆ'' ಎಂದನು.





ಉತ್ತುಂಗನು ಸರಿ ಎಂದು ಗೆಳೆಯರೊಂದಿಗೆ ಸೇರಿ ಹೊರಟು ಹೋದನು.

ಅರ್ಧರಾತ್ರಿಯವರೆಗೂ ನಾಯಕನು ಕಾವಲು ಇದ್ದವರೊಂದಿಗೆ ಕಲೆತು ತಿರುಗಿದನು. ಅನಂತರ ಮಿಕ್ಕವರು ಮತ್ತೆ ಮತ್ತೆ ಹೇಳಿದ್ದರಿಂದ ಅತ ಮನೆಗೆ ಹೋಗಿ ಮಲಗಿದನು.

ಬೆಳಗಾದ ಮೇಲೆ, ಕಾವಲು ಇದ್ದವರು ಬಂದು ನಾಯಕನೊಂದಿಗೆ "ರಾತ್ರಿ ಇತ್ತ ಕಡೆ ರಾಕ್ಷಸೀ ಮೃಗ ಬರಲಿಲ್ಲ. ಆದರೆ ಎಲ್ಲೋ ಮರಗಳು ಬಿದ್ದಿದ್ದು, ಬಂಡೆಗಳು ಉರುಳಿದ್ದು ಇಂಥಾ ವಿಚಿತ್ರ ಸದ್ದುಗಳು ದೂರದಿಂದ ಕೇಳಿಸುತ್ತಿತ್ತು. ನಾಲ್ಕನೇ ಜಾವದಲ್ಲಿ ಆ ಸದ್ದುಗಳು ಸಹಾ ಕ್ರಮೇಣ ನಿಂತು ಹೋದುವು" ಎಂದು ಹೇಳಿದರು.

"ಹಾಗೇನು? ಸರಿ... ನೀವು ಹೊರಡಿ" ಎಂದನು ನಾಯಕ.

ಮರುದಿನ ಬೆಳಿಗ್ಗೆ ಉತ್ತುಂಗನು ನಾಯಕನ ಆಜ್ಞೆಯ ಪ್ರಕಾರ ಮಿತ್ರರೊಂದಿಗೆ ಹೋಗಿ, ಹಿಂದಿನ ದಿನ ಕುಯಿದು ಕಟ್ಟಾಗಿ ಕಟ್ಟಿದ್ದ ಶತಾಬ್ಧಿಕ ಹೂವುಗಳನ್ನು ತೆಗೆದುಕೊಂಡು ಬಂದನು. ಅವರು ಬರುವ ಸಮಯಕ್ಕೆ ದೋಣಿಯ ಹತ್ತಿರ ಅವರ ನಾಯಕನು ಹಾಗೂ ಅವನ ತಂಗಿ ರಜನಿ ಇದ್ದರು. ದೋಣಿ ಸಿದ್ಧವಾಗಿತ್ತು. ನಾಯಕನು ಆ ಪುಷ್ಪಗಳನ್ನು ಆಶ್ಚರ್ಯದಿಂದ ತುಸು ಸಮಯ ಪರೀಕ್ಷಿಸಿ ನೋಡಿದನು. ಅವುಗಳ ಪರಿಮಳ ಅಲ್ಲಿದ್ದವರನ್ನು ಎಲ್ಲಾ ಮಂತ್ರಮುಗ್ಧರನ್ನಾಗಿಸಿತು. ಪರಿಮಳದೊಂದಿಗೆ ಅರಳಿ ನಗುತ್ತಿರುವ ಆ ಪುಷ್ಪಗಳ ಅಂದ ಎಲ್ಲರನ್ನು ಮೂಕರನ್ನಾಗಿ ಮಾಡಿತು. "ಇಂಥಾ ವಿಶೇಷವಾದ ಪುಷ್ಪಗಳಿಗೆ ಎಂತಹ ಮಹತ್ತರವಾದ ಶಾಪ" ಎಂದು ನಾಯಕ ತನ್ನಲ್ಲಿ ತಾನು ಅಂದುಕೊಂಡನು.

ಮರುದಿನ ಬೆಳಗಿನ ಜಾವದಲ್ಲಿ ನಾಯಕ, ಉತ್ತುಂಗ, ತಮ್ಮ ಪರಿವಾರದೊಂದಿಗೆ ಹೊರಟರು. ಮುಂದೆ ನಾಯಕ, ಹಿಂದೆ ಉತ್ತುಂಗ, ಅವನ ತಂಗಿ, ಅವರ ಹಿಂದೆ ದೋಣಿಯನ್ನು ಭುಜಗಳ ಮೇಲೆ ಹೊತ್ತು ನಾಲ್ಕು ಜನ ದೃಢಕಾಯರು, ದಕ್ಷಿಣ ಸಮುದ್ರದ ದಿಕ್ಕಿನಲ್ಲಿ ವೇಗವಾಗಿ ನಡೆಯಲು ಆರಂಭಿಸಿದರು.

ಪಟ್ಟಿಯ ಜನ ಬಹಳ ಮಂದಿ, ಸ್ವಲ್ಪ ದೂರದ ವರೆಗೆ ಅವರ ಹಿಂದೆಯೇ ಬಂದು, ಅವರನ್ನು ಬೀಳ್ಕೊಟ್ಟರು.

ಹೊತ್ತು ಮುಳುಗುವುದರಲ್ಲಿ ಸಮುದ್ರ ತೀರವನ್ನು ಸೇರಬೇಕೆಂಬ ಹಠದಿಂದ ಅವರು ವೇಗವಾಗಿ ನಡೆದು ಮಧ್ಯಾಹ್ನಕ್ಕೆ ಅರ್ಧದಾರಿ ತಲುಪಿ, ಒಂದು ವಟವೃಕ್ಷದ ಕೆಳಗೆ ಸ್ವಲ್ಪ ಸಮಯ ವಿಶ್ರಾಂತಿ ತೆಗೆದುಕೊಂಡರು. ಆಮೇಲೆ ಹೊರಟು ಸೂರ್ಯಾಸ್ತಮಾನಕ್ಕೆ ಮುಂಚಿತವಾಗಿಯೇ ಸಮುದ್ರ ತೀರ



ಸೇರಿದರು. ದೋಣಿಯನ್ನು ಹೊತ್ತುಕೊಂಡು ಬಂದವರು ಅದನ್ನು ಸಮುದ್ರದ ನೀರಿನ ಬಳಿ ಇಳಿಸಿದರು. ಮಿಕ್ಕವರು ಹೂವಿನ ಕಟ್ಟುಗಳನ್ನು ದೋಣಿಯಲ್ಲಿ ಹಾಕಿದರು. ಹೂವುಗಳಿಂದ ಮಧುರವಾದ ಪರಿಮಳ ಬೀಸಿತು. ಉತ್ತುಂಗನು ನಾಯಕನ ಚರಣಗಳಿಗೆ ನಮಸ್ಕರಿಸಿದನು. ನಾಯಕನು ಅವನನ್ನು ಆತ್ಮೀಯತೆಯಿಂದ ಮೇಲೆ ಎತ್ತಿ "ನಿನಗೆ ಖಂಡಿತ ವಿಜಯ ಲಭಿಸುತ್ತದೆ. ನಮ್ಮ ಕುಲದೇವತೆಯ ಕರುಣೆಯಿಂದ ನೀನು ಬೇಗನೇ ಜಯಶೀಲನಾಗಿ ಹಿಂತಿರುಗಿ ಬರುವೆ'' ಎಂದು ಆಶೀರ್ವದಿಸಿದನು.

ಪಕ್ಕದಲ್ಲೇ ಇದ್ದ ರಜನಿ "ನೀನು ಬೇಗ ಈ ಕಾರ್ಯದಲ್ಲಿ ಜಯಶಾಲಿಯಾಗಿ ಬರಬೇಕು ಅಣ್ಣಾ! ನಿನಗಾಗಿ ಎದುರು ನೋಡುತ್ತಿರುತ್ತೇನೆ'' ಎಂದು ಹೇಳಿ ಅನ್ನದ ಬುತ್ತಿಯನ್ನು ಉತ್ತುಂಗನಿಗೆ ಕೊಟ್ಟಳು. "ಇದು ಮಾರ್ಗ ಮಧ್ಯದಲ್ಲಿ ಹಸಿವು ಆದರೆ ತಿನ್ನಲು'' ಎಂದು ಹೇಳಿದಳು.

ಉತ್ತುಂಗನು ನಗುತ್ತಾ ಅದನ್ನು ತೆಗೆದುಕೊಂಡು, "ನಿನಗೆ ಯಾವ ಕೊರತೆಯೂ ಇಲ್ಲದಂತೆ ಯುವರಾಣಿ ನೋಡಿಕೊಳ್ಳುತ್ತಾಳೆ. ನಾನು ಬೇಗನೆ ತಿರುಗಿ ಬರುತ್ತೇನೆ. ಈ ಮಾತನ್ನು ಯುವರಾಣಿಗೆ ಹೇಳು'' ಎಂದು ಮಿತ್ರರ ಕಡೆ ಒಂದು ಸಲ ನಗುತ್ತಾ ನೋಡಿ, ದೋಣಿಯನ್ನು ಹತ್ತಿ ಅದರ ಹುಟ್ಟನ್ನು ಕೈಗೆ ತೆಗೆದುಕೊಂಡನು.

ಮಿತ್ರರು ದೋಣಿಯನ್ನು ನೀರಿನಲ್ಲಿ ತಳ್ಳಿದರು. ದೋಣಿ ಅಲೆಗಳ ಮೇಲೆ ಕೆಳಗೆ ಮೇಲೆ ಏಳುತ್ತಾ ಮುಂದಕ್ಕೆ ಸಾಗಿತು. ದಡದಲ್ಲಿ ಇದ್ದವರು ಎಲ್ಲರೂ ನಗುತ್ತಾ ಕೈಗಳನ್ನೆತ್ತಿ ಉತ್ತುಂಗನನ್ನು ಬೀಳ್ಕೊಟ್ಟರು. ದೋಣಿ ಮತ್ತಷ್ಟು ವೇಗದಿಂದ ರಭಸದಿಂದ ಹೋಯಿತು.

ದೋಣಿ ಕಣ್ಮರೆ ಆಗುವವರೆಗೂ ಅಲ್ಲಿಯೇ ನಿಂತು ಅದನ್ನೇ ನೋಡುತ್ತಿದ್ದ ನಾಯಕನು ಹಿಂತಿರುಗಲು, ಮಿಕ್ಕವರು ಸಹಾ ಆತನನ್ನು ಹಿಂಬಾಲಿಸಿದರು. ನಾಯಕನು ರಜನಿಯ ಬೆನ್ನನ್ನು ಸಮಾಧಾನಗೊಳಿಸುವಂತೆ ಸ್ಪರ್ಶಿಸಿದನು. ಎಲ್ಲರೂ ರಾಜಧಾನೀ ನಗರದ ಕಡೆ ನಡೆಯಲು ಆರಂಭಿಸಿದರು.

ದಾರಿಯಲ್ಲಿ ಅವರಿಗೆ, ನೆಲಸಮವಾದ ಮನೆಗಳು, ಮರಗಳು, ನಾಶವಾಗಿರುವ ಪ್ರದೇಶಗಳು ಕಾಣಿಸಿದವು. ಅಂಥಾ ಭೀಕರ ಪರಿಸ್ಥಿತಿಯನ್ನು ಕೇವಲ ಮಾನವ ಮಾತ್ರರು ಮಾಡುವುದು ಸಾಧ್ಯವಿಲ್ಲವೆಂದು, ಅತೀತ ಬಲವಿರುವ ರಾಕ್ಷಸೀ ಮೃಗವೇ ಕಾರಣವೆಂದೂ ಅವರು ಅಂದುಕೊಳ್ಳುತ್ತಾ ಮುಂದೆ ನಡೆದರು. ರಾತ್ರಿ ಆಗುತ್ತಿರಲು, ರಾಕ್ಷಸೀ ಮೃಗ ಸಮುದ್ರದಿಂದ ಹೊರಗೆ ಬರುವ ಅಪಾಯವಿರುವ ಕಾರಣ ವೇಗವಾಗಿ ನಡೆದರು. ಸ್ವಲ್ಪ ದೂರ ಹೋದ ನಂತರ ದಟ್ಟವಾದ ಕಾಡು ಎದುರಾಯಿತು.

ಆಕಾಶದಲ್ಲಿ ಮೇಘಗಳು ಆವರಿಸಿಕೊಂಡು ಕತ್ತಲಾಗಿ ಇರುವುದರಿಂದ ಅವರು ಇನ್ನೂ ಮುಂದೆ ಹೋಗ ಲಾರದೆ, ಒಂದು ಕಡೆ ಉಳಿದು, ರಾತ್ರಿ ಪೂರ್ತಿ ಅಲ್ಲೇ ಕಳೆದರು.

ಪೂರ್ವದಲ್ಲಿ ಬೆಳಕು ಕಂಡಾಗ ಅವರು ಹೊರಟು ಮಧ್ಯಾಹ್ನದ ವೇಳೆಗೆ ರಾಜಧಾನಿ ನಗರವನ್ನು ಸೇರಿದರು. ರಾಜಪ್ರಾಸಾದಕ್ಕೆ ತಲುಪಿ ಕಾವಲು ಭಟರಿಗೆ ತಮ್ಮ ಬರುವಿಕೆಯ ಬಗ್ಗೆ ತಿಳಿಸಿದರು. ರಾಜಪ್ರಾಸಾದದ ಒಳಗೆ ಸೇನಾಧಿಪತಿ ಗಂಭೀರವರ್ಮ ನೊಂದಿಗೆ ಚರ್ಚೆ ಮಾಡುತ್ತಿದ್ದ ರಾಜ ಪ್ರತಾಪ ವರ್ಮನು ಅವರು ಬಂದ ಸುದ್ದಿ ಕೇಳುತ್ತಲೇ, ಸೇನಾಧಿಪತಿಯೊಂದಿಗೆ ಹೊರಗೆ ಬಂದು, ಆದರ ದಿಂದ ಆಹ್ವಾನಿಸಿದನು.

“ಮಾಣಿಕ್ಯಪುರಿಯನ್ನು ಆಪತ್ತಿನಿಂದ ರಕ್ಷಿಸಲು ನೀವು ಎಲ್ಲರೂ ತೋರುತ್ತಿರುವ ಶ್ರದ್ಧೆ ಮರೆಯ ಲಾರದ್ದು. ಪ್ರಜೆಗಳು ನಿಮ್ಮ ತ್ಯಾಗ ಗುಣವನ್ನು ಸದಾ ಕಾಲ ನೆನಪಿನಲ್ಲಿ ಉಳಿಸಿಕೊಳ್ಳುತ್ತಾರೆ'' ಎಂದನು ರಾಜ.

“ನಮ್ಮ ಭಾದ್ಯತೆಯನ್ನು ನೆರವೇರಿಸಲು ಒಂದು ಅವಕಾಶ ದೊರೆತದ್ದಕ್ಕಾಗಿ ನಮಗೆ ಎಷ್ಟೋ ಸಂತಸ ವಾಗಿದೆ ಮಹಾರಾಜಾ! ನಿನ್ನೆ ಸಾಯಂಕಾಲವೇ ಉತ್ತುಂಗನು ಶತಾಬ್ಧಿಕ ಪುಷ್ಪಗಳನ್ನು ತೆಗೆದುಕೊಂಡು ರಾಕ್ಷಸೀ ಮೃಗವನ್ನು ಹುಡುಕುತ್ತಾ ಸಮುದ್ರದಲ್ಲಿ ಹೋದನು'' ಎಂದನು ಬೆಟ್ಟದ ಜಾತಿಯವರ ನಾಯಕ ಶುಂಭನು.

“ಹಾಗೇನು? ಆಗಲೇ ಹೋದನೇ! ತುಂಬ ಸಂತೋಷ'' ಎಂದು ರಾಜನು ರಜನಿಯ ಕಡೆ ತಿರುಗಿ “ರಜನೀ! ಹೀಗೆ ಬಾ'' ಎಂದನು.

ಅಷ್ಟರಲ್ಲಿ ರಜನಿ ಬಂದಿರುವ ಸುದ್ದಿ ತಿಳಿದು, ಅಲ್ಲಿಗೆ ಬಂದ ಯುವರಾಣಿ ಪ್ರಿಯಂವದ ನಗುತ್ತಾ ರಜನಿಯ ಬಳಿ ಹೋಗಿ “ಈ ಕ್ಷಣದಿಂದ ನಾವು ಇಬ್ಬರೂ ಗೆಳತಿಯರು'' ಎಂದು ಅವಳ ಭುಜದ ಮೇಲೆ ಕೈ ಹಾಕಿ ಅವಳನ್ನು ತನ್ನ ಅಂತಃಪುರ ಭವನಕ್ಕೆ ಕರೆದುಕೊಂಡು ಹೋದಳು.

“ನನ್ನ ಅಣ್ಣ, ದೋಣಿಯನ್ನು ಹತ್ತಿ ಹೊರಡು ವಾಗ ಬೇಗನೇ ಬರುವೆನೆಂದು ನಿಮ್ಮಲ್ಲಿ ಹೇಳುವಂತೆ ಹೇಳಿ ಹೋದನು'' ಎಂದಳು ರಜನಿ.

“ಹೌದೇನು? ತುಂಬ ಸಂತೋಷ. ನಿಮ್ಮ ಅಣ್ಣ ವಿಜಯವನ್ನು ಸಾಧಿಸಿ ಬೇಗ ತಿರುಗಿ ಬರುವ ನೆಂದು ನನಗೆ ನಂಬಿಕೆ ಇದೆ'' ಎಂದಳು ಯುವರಾಣಿ ಮೆಲ್ಲನೆ ನಗುತ್ತಾ.

(ಇನ್ನೂ ಇದೆ)





# ವಿಚಿತ್ರಪುಷ್ಪ

೭

ರಾಜ ಪ್ರತಾಪವರ್ಮನ ಕೋರಿಕೆಯ ಪ್ರಕಾರ ಉತ್ತುಂಗನು, ಗೆಳೆಯರನ್ನು ಕರೆದುಕೊಂಡು ಹೋಗಿ, ಶತಾಬ್ಧಿಕ ಪುಷ್ಪಗಳನ್ನು ಕುಯಿದುಕೊಂಡು ಬಂದನು. ಇಷ್ಟರಲ್ಲಿ ದೋಣಿ ಸಿದ್ಧವಾಯಿತು. ಉತ್ತುಂಗ ಪಂಗಡದ ನಾಯಕ, ಉತ್ತುಂಗನ ತಂಗಿ ರಜನಿ ಮತ್ತೆ ನಾಲ್ವರು ಮಿತ್ರರು, ಉತ್ತುಂಗನ ಹಿಂದೆ ಸಮುದ್ರದ ವರೆಗೂ ಬಂದು ಅತನನ್ನು ಬೀಳ್ಕೊಟ್ಟರು. ಉತ್ತುಂಗನು ಶತಾಬ್ಧಿಕ ಹೂಗಳೊಂದಿಗೆ ರಾಕ್ಷಸೀ ಮೃಗವನ್ನು ಹುಡುಕುತ್ತಾ ಸಮುದ್ರ ಮಧ್ಯಕ್ಕೆ ದೋಣಿಯಲ್ಲಿ ಒಂಟಿಯಾಗಿ ಪ್ರಯಾಣ ಮಾಡಿದ – ಆಮೇಲೆ

ಉತ್ತುಂಗನಿಗೆ ದೋಣಿ ಪ್ರಯಾಣದಲ್ಲಿ ಅನುಭವ ಇಲ್ಲ. ಶೃಂಗಾದ್ರಿಯ ಬೆಟ್ಟಗಳಲ್ಲಿ ಝರಿಯನ್ನು ಬಿಟ್ಟು ದೊಡ್ಡ ನದಿಗಳು ಇಲ್ಲ. ಅಲ್ಲಿರುವ ಒಂದೇ ಒಂದು ನದಿ ಚಿತ್ರಾವತಿ ಉಕ್ಕಿದಾಗ ಉತ್ತುಂಗನು ಮಿತ್ರರೊಂದಿಗೆ ಸೇರಿ, ತೆಪ್ಪದ ಮೇಲೆ ಸ್ವಲ್ಪ ದೂರ ಉಲ್ಲಾಸವಾಗಿ ಹೋಗಿ ಬರುತ್ತಿದ್ದನೇ ಹೊರತು ದೋಣಿಯನ್ನು ನಡೆಸುವ ಅವಶ್ಯಕತೆ ಅವನಿಗೆ ಇದಕ್ಕೆ ಮೊದಲು ಏರ್ಪಟ್ಟಿರಲಿಲ್ಲ. ಆದರೂ ಈಗ ಮಾಣಿಕ್ಯಪುರಿಯನ್ನು ರಾಕ್ಷಸೀ ಮೃಗದಿಂದ ಕಾಪಾಡ ಬೇಕೆಂಬ ದೃಢ ಸಂಕಲ್ಪದಿಂದ ಅವನು ದೋಣಿ ಯನ್ನು ಮುಂದಕ್ಕೆ ನಡೆಸಿದನು. ಸಮುದ್ರದಲ್ಲಿ ಸ್ವಲ್ಪ ದೂರ ಹೋದ ನಂತರ ಅಲೆಗಳ ಉಗ್ರತೆ ತಗ್ಗಿತು. ಚಿಕ್ಕ ಚಿಕ್ಕ ಅಲೆಗಳ ಮೇಲೆ ದೋಣಿ ವೇಗ ದಿಂದ ಸಾಗಿತು. ಹಾಗೇ ಸ್ವಲ್ಪ ದೂರ ಹೋಗಿ, ಅದು ನಿಶ್ಚಲವಾಗಿದ್ದ ನೀರಿನಲ್ಲಿ ಪ್ರವೇಶಿಸಿತು. ಈಗ ದೋಣಿ ಮುಂದೆ ಸಾಗಬೇಕಾದರೆ ಹುಟ್ಟು ಉಪಯೋಗಿಸಬೇಕಾಗಿ ಬಂದು, ಅವನು ಅದನ್ನು ತೆಗೆದುಕೊಂಡನು.



ಏನಾಗಿರಬಹುದು ಎಂದು ಅವನು ಪರಿಶೀಲಿಸಿ ನೋಡಿದನು. ಮುಖವು ಸ್ಪಷ್ಟವಾಗಿ ಕಾಣದಿದ್ದರೂ, ಅದರ ದೊಡ್ಡ ತಲೆ, ಅಗಲವಾದ ಭುಜ, ದೊಡ್ಡ ದೊಡ್ಡ ಕೈಗಳನ್ನು ನೋಡಿ ಅದು ಖಂಡಿತ ರಾಕ್ಷಸೀ ಮೃಗವೇ ಆಗಿರಬೇಕೆಂದು ಉತ್ತುಂಗನು ಗ್ರಹಿಸಿದನು. ಅದು ಕದಲುವ ರೀತಿಯನ್ನು ನೋಡಿದರೆ ಅಷ್ಟಾಗಿ ಆಳವಿಲ್ಲದ ನೀರಿನಲ್ಲಿ ದೊಡ್ಡ ಹೆಜ್ಜೆ ಇಡುತ್ತಾ ನಡೆದು ಬರುವಂತೆ ಅವನಿಗೆ ತೋರಿತು.

ನಡು ಸಮುದ್ರದಲ್ಲಿ ರಾಕ್ಷಸೀ ಮೃಗವನ್ನು ಎದುರಿಸುವುದು ದುಸ್ಸಾಹಸ ಎಂದು ಭಾವಿಸಿದ ಅವನು ಸಮೀಪದಲ್ಲಿ ಭೂಭಾಗ ಕಾಣುವವರೆಗೂ ಅದಕ್ಕೆ ಸಿಗದ ಹಾಗೆ ಹೋಗಬೇಕೆಂದು ನಿಶ್ಚಯ ಮಾಡಿಕೊಂಡನು. ದೋಣಿಯನ್ನು ವೇಗವಾಗಿ ನಡೆಸುತ್ತಾ, ರಾಕ್ಷಸೀ ಮೃಗ ಬರುತ್ತಿರುವುದೇ ಇಲ್ಲವೇ ಎಂದು ತಿರುಗಿ ನೋಡುತ್ತಾ ಪ್ರಯಾಣ ಸಾಗಿಸಿದನು. ಸ್ವಲ್ಪ ದೂರ ಹೋದ ಮೇಲೆ ದೂರದಲ್ಲಿ ದೊಡ್ಡ ಕಲ್ಲುಗಳ ಗುಡ್ಡ ಕಾಣಿಸಿತು. ಆಹಾ! ಭೂ ಪ್ರದೇಶ!! ಎಂಬ ಆನಂದದಿಂದ ಅದನ್ನು ಸಮೀಪಿಸಿದನು. ಆದರೆ ತೀರಾ ಹತ್ತಿರ ಹೋದಾಗ ನೆಲದ ಮೇಲೆ ಕಾಲಿಡಲು ಸ್ಥಳವೇ ಇಲ್ಲ. ಎಲ್ಲಿ ನೋಡಿದರೂ ಎತ್ತರವಾದ ಬಂಡೆಗಳೇ ಇದ್ದುವು. ಮೇಲಾಗಿ ಅಲ್ಲಿ ಅಲೆಗಳು ಅತಿ ಎತ್ತರವಾಗಿ ಬಂದು ಕಲ್ಲುಗಳನ್ನು ಅಪ್ಪಳಿಸುವುದರಿಂದ ದೋಣಿ ಮತ್ತೆ ಮೇಲೆ ಕೆಳಗೆ ಆಡಲು ಆರಂಭಿಸಿತು. ಅದನ್ನು ಹಿಡಿತದಲ್ಲಿ ಇಡಲು ಉತ್ತುಂಗನು ಅತಿ ಕಷ್ಟದಿಂದ ಪ್ರಯತ್ನಿಸತೊಡಗಿದ. ಆಗ ಹಠಾತ್ತನೆ ತಾಳೆಮರದಷ್ಟು ಪ್ರಮಾಣದಲ್ಲಿ ಬಂದ ಒಂದು ರಾಕ್ಷಸ ಅಲೆ ದೋಣಿಯನ್ನು ಮೇಲಕ್ಕೆ ಎತ್ತಿ ಎಸೆಯಿತು. ಆ ವೇಗಕ್ಕೆ ದೋಣಿ ತಲೆ ಕೆಳಗೆ ಆಯಿತು. ಉತ್ತುಂಗನು ಎಗರಿ ದೋಣಿಯ ಆಚೆಗೆ

ಮೆಲ್ಲ ಮೆಲ್ಲನೆ ಸುತ್ತುಮುತ್ತಲೂ ದಟ್ಟವಾದ ಕತ್ತಲು ಆವರಿಸಿತು. ಮೇಘಗಳು ಇಲ್ಲದೆ ಆಕಾಶ ನಿರ್ಮಲವಾಗಿದ್ದ ಕಾರಣ ನಕ್ಷತ್ರಗಳು ಒಂದೊಂದು ಮಿಂಚುತ್ತಾ ಹೊರ ಬರುತ್ತಿತ್ತು. ಮತ್ತೆ ಸ್ವಲ್ಪ ಸಮಯದಲ್ಲಿ ಎತ್ತ ನೋಡಿದರೂ ಗಾಢಾಂಧಕಾರ ತುಂಬಿತು. ರಾಕ್ಷಸೀ ಮೃಗ ಯಾವ ಕ್ಷಣದಲ್ಲಾದರೂ, ಎತ್ತ ಕಡೆಯಿಂದಲಾದರೂ ನೀರಿನಿಂದ ಮೇಲಕ್ಕೆ ಬರಬಹುದು ಎಂಬ ಎಚ್ಚರಿಕೆಯಿಂದ ಉತ್ತುಂಗನು ಸುತ್ತ ಮುತ್ತ ನೋಡುತ್ತಾ ಮುಂದಕ್ಕೆ ಸಾಗಿದನು. ಬಹಳ ದೂರ ಹೋದ ಮೇಲೆ ಹಠಾತ್ತನೆ ಅವನ ಹಿಂದೆಯೇ ಯಾವುದೋ ಕಪ್ಪನೆಯ ಆಕಾರ ಕಾಣಿಸಿತು. ಉತ್ತುಂಗನು ತಕ್ಷಣ ದೋಣಿಯನ್ನು ಹಿಂದಕ್ಕೆ ತಿರುಗಿಸಿದನು. ಆ ಕಪ್ಪನೆಯ ಆಕಾರ ಕ್ರಮೇಣ ದೊಡ್ಡದಾಗುತ್ತಾ ದೋಣಿಯ ಕಡೆ ಬರುವುದನ್ನು ಅವನು ಗಮನಿಸಿದನು. ಅದು

ಇದ್ದ ಮರಳಿನ ಮೇಲೆ ಬಿದ್ದನು. ದೋಣಿಯಲ್ಲಿ ಇದ್ದ ಹೂಗಳು ಅವನ ತಲೆಯ ಮೇಲೆ ಚೆಲ್ಲಾ ಚೆದುರಾಗಿ ಬಿದ್ದುವು.

ಕಣ್ಣು ಮುಚ್ಚಿ ತೆರೆಯುವಷ್ಟರಲ್ಲಿ ನಡೆದು ಹೋದ ಈ ಹಠಾತ್ ಪರಿಣಾಮದಿಂದ ಉಸಿರು ಕಟ್ಟಿದಂತಾಗಿ ಮರುಕ್ಷಣವೇ ಚೇತರಿಸಿಕೊಂಡನು ಉತ್ತುಂಗ. ಚೆಲ್ಲಾ ಚೆದುರಾಗಿ ಬಿದ್ದಿದ್ದ ಹೂವು ಗಳನ್ನು ಆರಿಸಿಕೊಂಡು ದೋಣಿಯ ಬಳಿಗೆ ಬಂದನು. ಅಷ್ಟರಲ್ಲಿ ಬಹಳ ಹೂವುಗಳು ನೀರಿನ ಮೇಲೆ ತೇಲುತ್ತಾ ಹೋಗುವುದನ್ನು ಗಮನಿಸಿದನು. ಶತಾಬ್ಧಿಕ ಪುಷ್ಪಗಳು ಅಲ್ಲಿ ಇರುವುದರಿಂದ ರಾಕ್ಷಸೀ ಮೃಗ ಇತ್ತ ಕಡೆ ಆಕರ್ಷಿತವಾಗಿ ಬರಬಹುದು ಎಂದು ಅವನು ಅಂದುಕೊಂಡನು. ಆದರೆ ಅಲ್ಲಿ ಇರುವ ಮಾರ್ಗ ತುಂಬಾ ಇಕ್ಕಟ್ಟಾಗಿತ್ತು. ಅದು ರಾಕ್ಷಸೀ ಮೃಗ ಬರಲು ಸಾಕಾಗದು. ಪುನಃ ದೋಣಿಯಲ್ಲಿ ಹೋಗಿ ರಾಕ್ಷಸೀ ಮೃಗವನ್ನು ಕರೆದುಕೊಂಡು ಬರಲು ಸಾಧ್ಯವಿಲ್ಲದ ಕೆಲಸ. ಏನು ಮಾಡಬೇಕೆಂದು ಯೋಚಿಸುತ್ತಾ ಅವನು ಸ್ವಲ್ಪ ಸಮಯ ಹಾಗೆಯೇ ನಿಂತನು. ರಾಕ್ಷಸೀ ಮೃಗ ಕಾಣುವುದೇನೋ ಎಂದು ಮತ್ತೊಂದು ಸಲ ಜಾಗ್ರತೆಯಾಗಿ ನೋಡಿ ದನು. ಆದರೆ ಅದರ ಸುಳಿವೇ ಕಾಣಲಿಲ್ಲ. ಬಹಳ ಹೊತ್ತು ಕಳೆಯಿತು. ಪೂರ್ವ ದಿಕ್ಕಿನಲ್ಲಿ ತುಸು ಬೆಳಕು ಕಾಣಿಸುತ್ತಿರುವ ಸಮಯದಲ್ಲಿ ಅವನಿಗೆ ಸಮುದ್ರದಲ್ಲಿ ರಾಕ್ಷಸೀ ಮೃಗದ ಬೆನ್ನು ಕಾಣಿಸಿತು. ರಾಜರು ಹೇಳಿದಂತೆ ಆ ರಾಕ್ಷಸೀ ಮೃಗ ಬೆಳಕು ಮೂಡುವ ಮೊದಲೇ ಸಮುದ್ರ ಮಧ್ಯದಲ್ಲಿ ಸೇರುವುದು ಎಂದು ಅವನು ಗ್ರಹಿಸಿದನು. ಮತ್ತೆ ಹೊತ್ತು ಮುಳುಗಿ ರಾತ್ರಿ ಆಗುವ ವರೆಗೂ ಅದು ಸಮುದ್ರವನ್ನು ಬಿಟ್ಟು ಬರುವ ಅವಕಾಶ ಇಲ್ಲವೆಂದು ಅವನು ನಿರ್ಣಯಿಸಿಕೊಂಡನು.



ಅನಂತರ ಅವನು ತಲೆಕೆಳಗಾಗಿ ಬಿದ್ದಿರುವ ದೋಣಿಯನ್ನು ಭುಜಗಳಿಂದ ಮೇಲಕ್ಕೆ ಎತ್ತಿ ಸರಿ ಯಾಗಿ ಇಟ್ಟನು. ಆರಿಸಿ ಇಟ್ಟಿದ್ದ ಶತಾಬ್ಧಿಕ ಪುಷ್ಪ ಗಳನ್ನು, ಸಸಿಗಳನ್ನು ತೆಗೆದು ದೋಣಿಯಲ್ಲಿ ಇಟ್ಟನು. ಆ ಹೂವುಗಳು ಇದೀಗ ಅರಳಿದಂತೆ ಸುವಾಸನೆಯನ್ನು ಚೆಲ್ಲುತ್ತಿದ್ದುವು. ಆ ಸಸಿಗಳನ್ನು ನೆಡಲು, ಹೂವುಗಳನ್ನು ಬಚ್ಚಿಡಲು ಸರಿಯಾದ ಸ್ಥಳ ಎಲ್ಲಿದೆ ಎಂದು ಸುತ್ತ ಮುತ್ತ ಪರಿಶೀಲಿಸಿ ನೋಡಿದನು. ಆಗಲೇ ಚೆನ್ನಾಗಿ ಬೆಳಕು ಬಂದಿತ್ತು. ಅವನು ಯೋಚಿಸುತ್ತಾ ಒಂದು ಬಂಡೆಯ ಮೇಲೆ ಕುಳಿತುಕೊಂಡು, ವಿಶ್ರಾಂತಿಗಾಗಿ ಕಣ್ಣು ಮುಚ್ಚಿದನು. ಇಡೀ ರಾತ್ರಿ ಪ್ರಯಾಣ ಮಾಡಿದ್ದರಿಂದ ಬಹಳ ಆಯಾಸಗೊಂಡ ಅವನು ಮೈ ಮರೆತು ನಿದ್ದೆ ಮಾಡಿದನು.

ಹಾಗೆ ಎಷ್ಟು ಹೊತ್ತು ನಿದ್ದೆ ಮಾಡಿದನೋ



ಅವನಿಗೇ ತಿಳಿಯದು. ತಲೆಯ ಹಿಂದೆ ಹೆಣ್ಣುಗಳ ನಗುವಿನ ಶಬ್ದ ಕೇಳಿ ಬೆಚ್ಚಿ ಬಿದ್ದು, ಎಚ್ಚೆತ್ತು ತಾನು ಕನಸು ಕಾಣುತ್ತಿಲ್ಲವಲ್ಲಾ ಎಂದು ಅಂದುಕೊಂಡು ತಲೆ ತಿರುಗಿಸಿ ಹಿಂದೆ ನೋಡಿದನು. ಆರು ಜನ ಯುವತಿಯರು ಸರಸರನೆ ಬಂದು ಅವನನ್ನು ಸುತ್ತುವರಿದು ನಿಂತರು. ಅವರ ವೇಷ ಭೂಷಣಗಳು ವಿಚಿತ್ರವಾಗಿದ್ದುವು. ಬಣ್ಣ ಬಣ್ಣದ ಉಡುಪುಗಳನ್ನು ಧರಿಸಿದ್ದರು. ಕೇಶವನ್ನು, ಕೈಗಳನ್ನು ಹೂವುಗಳಿಂದ ಅಲಂಕರಿಸಿಕೊಂಡಿದ್ದ ಅವರು ಬೆಟ್ಟದ ಜಾತಿಯವರು ಆಗಿರಬಹುದೆಂದು ಉತ್ತುಂಗನು ಭಾವಿಸಿದನು. ಆದರೆ ಅವರು ಮಾತಾಡುವ ಭಾಷೆ ಅವನಿಗೆ ಅರ್ಥವಾಗಲಿಲ್ಲ. ಆ ಆರು ಜನ ಯುವತಿಯರ ಕೈಗಳಲ್ಲೂ ಶತಾಬ್ಧಿಕ ಪುಷ್ಪಗಳು ಇದ್ದುವು. ಸಂತೋಷದಿಂದ ಆಘ್ರಾಣಿಸುತ್ತಾ ತಮ್ಮಲ್ಲಿ ತಾವೇ ಏನೋ ಮಾತಾಡಿಕೊಳ್ಳುತ್ತಿದ್ದರು. ಅವರು ತಮ್ಮ ಕೈಯಲ್ಲಿ ಇರುವ ಹೂಗಳನ್ನು ಮತ್ತೆ ಅಲ್ಲೇ ಇಟ್ಟು ಯಾವಾಗ ಹೋಗುತ್ತಾರೆಂದು ಕಾಯುತ್ತಾ ಅವನು ಸ್ವಲ್ಪ ಸಮಯವನ್ನು ಕಳೆದನು. ಆದರೆ ಅವರು ಹೋಗುವಂತೆ ಕಾಣಲಿಲ್ಲ.

ಅದನ್ನು ಗ್ರಹಿಸಿದ ಉತ್ತುಂಗನು "ನಾನು ಆ ಹೂಗಳನ್ನು ಮಾಣಿಕ್ಯಪುರಿಯಿಂದ ತೆಗೆದುಕೊಂಡು ಬರುತ್ತಿದ್ದೇನೆ. ಒಂದು ಮುಖ್ಯವಾದ ಕೆಲಸದ ನಿಮಿತ್ತ ಅವುಗಳನ್ನು ದೂರ ಪ್ರಾಂತ್ಯಕ್ಕೆ ಒಯ್ಯುತ್ತಿದ್ದೇನೆ. ನೀವು ಆ ಹೂಗಳನ್ನು ದಯವಿಟ್ಟು ದೋಣಿಯಲ್ಲಿ ಇಟ್ಟು ಬಿಡಿ. ಸೂರ್ಯಾಸ್ತಮಾನದ ನಂತರ ನಾನು ಇಲ್ಲಿಂದ ಹೊರಡಬೇಕು'' ಎಂದನು.

ರಾಕ್ಷಸೀ ಮೃಗದ ಬಗ್ಗೆ ಹೇಳಿ ಅವರನ್ನು ಹೆದರಿಸುವುದು ಅವನಿಗೆ ಇಷ್ಟವಿರಲಿಲ್ಲ.

"ಮಾಣಿಕ್ಯಪುರಿ! ಮಾಣಿಕ್ಯಪುರಿ!!'' ಎಂದು ಆ ಯುವತಿಯರು ನಕ್ಕರೇ ವಿನಃ ಬೇರೇನೂ ಮಾತಾಡಲಿಲ್ಲ.

ಉತ್ತುಂಗನು ದೋಣಿಯ ಬಳಿ ಹೋಗಿ ನಿಂತು, ಅವರನ್ನು ನೋಡುತ್ತಾ "ನೀವು ಆ ಹೂಗಳನ್ನು ಇಲ್ಲಿಂದ ತೆಗೆದಿರಿ ಅಲ್ಲವೇ?'' ಎಂದು ಕೇಳಿದನು ಕೈ ತೋರಿಸುತ್ತಾ.

"ಹೌದು'' ಎಂಬಂತೆ ತಲೆದೂಗಿದರು ಆ ಯುವತಿಯರು.

"ಮತ್ತೆ ಅವುಗಳನ್ನು ಅಲ್ಲೇ ಇಟ್ಟು ಬಿಡಿ'' ಎಂದನು ಸನ್ನೆ ಮಾಡುತ್ತಾ.

ಆ ಯುವತಿಯರು ತಲೆಗಳನ್ನು ಅಡ್ಡವಾಗಿ ಆಡಿಸಿ ಏನೋ ಹೇಳಿದರು. ಉತ್ತುಂಗನಿಗೆ ಆ ಮಾತುಗಳು ಸ್ವಲ್ಪವೂ ಅರ್ಥವಾಗಲಿಲ್ಲ. ಅವನು ಕೋಪದಿಂದ "ಆ ಹೂಗಳು ನನ್ನದು. ಮರ್ಯಾದೆಯಿಂದ ಅವುಗಳನ್ನು ದೋಣಿಯಲ್ಲಿ ಇಟ್ಟು ಬಿಡಿ'' ಎಂದು ಕೈ ಆಡಿಸುತ್ತಾ ಗದರಿಸಿದನು.



ಅಲ್ಲಿಂದ ಹೊರಟಿದ್ದರು. ಈಗಿನ ಪರಿಸ್ಥಿತಿಯಲ್ಲಿ ಇಲ್ಲಿ ಕಾಲ ಕಳೆಯುವುದಕ್ಕಿಂತಲೂ, ಇವರ ಹಿಂದೆ ಹೋಗುವುದೇ ಒಳ್ಳೆಯದು. ಇದಲ್ಲದೆ ಅನ್ಯ ಮಾರ್ಗವಿಲ್ಲ. ಇವರೆಲ್ಲರೂ ಯಾರು? ಯಾವ ಬೆಟ್ಟದ ಜಾತಿಗೆ ಸೇರಿದವರು? ಇವರಿಂದ ತನಗೆ ಉಪಕಾರ ಆಗುವುದೇ ಎಂದು ತಿಳಿಯಲು, ಇವರ ಹಿಂದೆ ಹೋಗುವುದೋ ಉತ್ತಮ ಎಂದು ಅವನು ಭಾವಿಸಿದನು.

"ಸರಿ, ಬರುತ್ತೇನೆ. ನಾನು ಅಲ್ಲಿಗೆ ಬಂದ ನಂತರ ನನ್ನ ಹೂವುಗಳನ್ನು ನನಗೆ ಕೊಡಬೇಕು" ಎಂದು ಉತ್ತುಂಗನು ಅವರ ಹಿಂದೆ ಹೊರಡಲು ಸಿದ್ಧನಾಗಿ ಒಮ್ಮೆ ದೋಣಿಯ ಕಡೆ ನೋಡಿದನು. ಅಲ್ಲಿ ಒಂದು ಹೂವು ಕೂಡಾ ಇರಲಿಲ್ಲ. ಸಸಿಗಳು ಮಾತ್ರ ಇದ್ದುವು. ದೋಣಿಯನ್ನು ಅಲ್ಲಿಯೇ ಬಿಟ್ಟರೆ ಮತ್ತೆ ದೊಡ್ಡ ಅಲೆ ಬಂದು ಅದನ್ನು ಸಮುದ್ರದಲ್ಲಿ ಎಳೆದುಕೊಂಡು ಹೋಗಬಹುದು ಎಂಬ ಅನುಮಾನದಿಂದ ಅವನು ದೋಣಿಯನ್ನು ಮತ್ತಷ್ಟು ದೂರ ತಳ್ಳಿಬಿಟ್ಟನು. ಸಸಿಗಳು ಅಲ್ಲಿರುವುದು ಅಷ್ಟು ಕ್ಷೇಮ ಅಲ್ಲವೆಂದು ಭಾವಿಸಿ, ಅವುಗಳನ್ನು ಕೈಗಳಲ್ಲಿ ತೆಗೆದುಕೊಂಡು ಹುಟ್ಟನ್ನು ದೋಣಿಯಲ್ಲಿ ಎಸೆದು, ಯುವತಿಯರ ಕಡೆ ನೋಡಿದನು. ಅವರು ಒಂದು ಕಡೆ ನಿಂತು ಉತ್ತುಂಗನಿಗಾಗಿ ನಗುತ್ತಾ ಎದುರು ನೋಡುತ್ತಿದ್ದರು.

ಉತ್ತುಂಗನು, ಚಕಚಕನೆ ನಾಲ್ಕಡಿ ಇಟ್ಟು ಅವರನ್ನು ಸಮೀಪಿಸಿದನು. ಅವರು ಮಾತಾಡುವ ಭಾಷೆಯನ್ನು ಅರ್ಥ ಮಾಡಿಕೊಳ್ಳಲು ಪ್ರಯತ್ನಿಸುತ್ತಾ, ಸ್ವಲ್ಪ ದೂರದಲ್ಲೇ ಅವರ ಹಿಂದುಗಡೆ ಮೌನವಾಗಿ ನಡೆಯಲು ಆರಂಭಿಸಿದನು. ಅವನು ತಮ್ಮ ಹಿಂದೆ ಬರುತ್ತಿರುವನೇ? ಇಲ್ಲವೇ ಎಂದು ಆಗಾಗ್ಗೆ ತಿರುಗಿ ನೋಡುತ್ತಾ ಆ ಯುವತಿಯರು

ಅವನ ಗದರಿಕೆಗೆ ಅವರು ಸ್ವಲ್ಪ ಸಹಾ ಹೆದರಲಿಲ್ಲ. ಅವನತ್ತ ನೋಡಿ ತಮ್ಮ ತಮ್ಮಲ್ಲೇ ಏನೇನೋ ಮಾತಾಡಿಕೊಂಡು ನಗುತ್ತಿದ್ದರು. ಉತ್ತುಂಗನು ಮತ್ತೆ ಮತ್ತೆ ಹೂಗಳನ್ನು ಹಿಂತಿರುಗಿಸಿ ಕೊಡುವಂತೆ ಕೇಳಿದನು.

ಆದರೆ ಅವರು ಹೂಗಳ ವಾಸನೆಯನ್ನು ನೋಡುತ್ತಾ, 'ಕಿಲಕಿಲ'ನೆ ನಗಲು ಆರಂಭಿಸಿದರು. ಕಡೆಗೆ ಅವರಲ್ಲಿ ಒಬ್ಬಳು ಉತ್ತುಂಗನನ್ನು ಸಮೀಪಿಸಿ, ಅವನನ್ನು ಮುಟ್ಟಿ ಕೈ ಎತ್ತಿ ದೂರದಲ್ಲಿ ತೋರಿಸುತ್ತಾ ಏನೋ ಹೇಳಿದಳು.

"ಈ ಹೂಗಳನ್ನು ತೆಗೆದುಕೊಂಡು ನಾವು ಮನೆಗೆ ಹೋಗುತ್ತಿದ್ದೇವೆ. ನೀನೂ ಬರುವೆಯಾ?" ಎಂದು ಕೇಳುವಂತೆ ಅವಳು ಮಾಡಿದ ಸನ್ನೆಗಳಿಂದ ಅವನು ತಿಳಿದುಕೊಂಡನು.

ಮಿಕ್ಕ ಐದು ಜನ ಯುವತಿಯರು ಆಗಲೇ

ತಮ್ಮ ನಿವಾಸದತ್ತ ನಡೆಯಲು ತೊಡಗಿದರು.

ಸ್ವಲ್ಪ ಸಮಯದಲ್ಲೇ ಅವರು ಮರಳು ಪ್ರದೇಶ ವನ್ನು ದಾಟಿ ಕೆಂಪು ಮಣ್ಣಿನ ಪ್ರಾಂತ್ಯವನ್ನು ಸೇರಿದರು. ಸುತ್ತಲೂ ಬೆಟ್ಟಗಳು ಇರುವ ಆ ಪ್ರದೇಶ ಒಂದು ಹಳ್ಳವಾಗಿರುವ ತಟ್ಟೆಯ ಹಾಗೆ ಇತ್ತು. ಎಲ್ಲೆಲ್ಲೂ ಮರ ಬಳ್ಳಿಗಳಿಂದ ಹಸಿರಾಗಿ ಇತ್ತು. ಆದರೆ ದೊಡ್ಡ ವೃಕ್ಷಗಳು ಕಾಣಲಿಲ್ಲ. ಮತ್ತೆ ಸ್ವಲ್ಪ ದೂರ ಹೋದ ಮೇಲೆ ಒಂದು ಚಿಕ್ಕ ಹಟ್ಟಿ ಕಾಣಿಸಿತು. ಇವರನ್ನು ನೋಡುತ್ತಲೇ ಗುಡಿಸಲು ಗಳಿಂದ ಹೊರಗೆ ಬಂದ ಕೆಲವು ಸ್ತ್ರೀಯರು, ಆ ಯುವತಿಯರನ್ನು ಏನೋ ಕೇಳಿದರು. ಅದಕ್ಕೆ ಯುವತಿಯರು ಮೊಟಕಾಗಿ ಸಮಾಧಾನ ಹೇಳುತ್ತಾ, ಹಟ್ಟಿಯ ನಡುವೆ ಇರುವ ದೊಡ್ಡ ಗುಡಿಸಲನ್ನು ಸಮೀಪಿಸಿ, 'ಅಮ್ಮಾ! ಅಮ್ಮಾ!' ಎಂದು ಕರೆದರು. ತುಸು ಸಮಯದ ನಂತರ ಮಧ್ಯವಯಸ್ಸಿನ ಒಬ್ಬಳು ಸ್ತ್ರೀ ಬಾಗಿಲು ತೆರೆದು ಹೊರಗೆ ಬಂದಳು.

"ನಾವು ಏನು ತಂದಿರುವೆವು ನೋಡು. ಅಂದವಾಗಿ ಇವೆ ಅಲ್ಲವೇ?'' ಎಂದು ತಾವು ತಂದಿರುವ ಹೂಗಳನ್ನು ತೋರಿಸಿದಳು ಒಬ್ಬ ಯುವತಿ ಎಷ್ಟೋ ಸಂತೋಷದಿಂದ.

"ತುಂಬ ಅಂದವಾಗಿದೆ. ಒಳ್ಳೆ ವಾಸನೆಯೂ ಬರುತ್ತಿದೆ. ಎಲ್ಲಿಂದ ತಂದಿರುವಿರಿ?'' ಎಂದು ಕೇಳಿ ದಳು ಆ ಸ್ತ್ರೀ.

"ಸಮುದ್ರ ತೀರಕ್ಕೆ ಹೋದಾಗ ಈ ಯುವಕನು ಒಂದು ಕಡೆ ನಿದ್ದೆ ಮಾಡುತ್ತಿರುವುದನ್ನು ಕಂಡೆವು. ಅವನ ಪಕ್ಕದಲ್ಲಿ ಒಂದು ದೋಣಿ, ದೋಣಿಯಲ್ಲಿ ಈ ಹೂವುಗಳನ್ನು ನೋಡಿದೆವು. ಅವನು ನಮ ಗಾಗಿಯೇ ತಂದಿರಬಹುದೆಂದು ಅವುಗಳನ್ನು ತೆಗೆದು ಕೊಂಡೆವು. ಅವನು ಮಾಣಿಕ್ಯಪುರಿಯಿಂದ ಬಂದಿರ ಬೇಕು. ಅವನು ಏನೋ ಹೇಳಿದನು. ಅರ್ಥವಾಗ



ಲಿಲ್ಲ. ನಮ್ಮ ಹಿಂದೆ ಕರೆದುಕೊಂಡು ಬಂದೆವು. ಅಂದವಾಗಿರುವನು ಅಲ್ಲವೇ?'' ಎಂದು ಒಬ್ಬಳು ಯುವತಿ ಉತ್ತುಂಗನನ್ನು ನೋಡಿದಳು.

"ಹೌದು, ಚೆನ್ನಾಗಿದ್ದಾನೆ. ಕಾಬೂಯಿ ಬರಲಿ. ಇವನೊಂದಿಗೆ ಮಾತನಾಡಿ ವಿಷಯ ತಿಳಿದು ಕೊಳ್ಳುವನು. ಇನ್ನು ನೀವು ಒಳಗೆ ಹೋಗಿ'' ಎಂದಳು ಆ ಸ್ತ್ರೀ.

ಆರು ಜನ ಯುವತಿಯರು ಒಬ್ಬರ ಹಿಂದೆ ಒಬ್ಬರು ಮನೆಯ ಒಳಗೆ ಹೋದರು. ಆ ಸ್ತ್ರೀ ಉತ್ತುಂಗನನ್ನು ಕುಳಿತುಕೊಳ್ಳುವಂತೆ ಸಂಜ್ಞೆ ಮಾಡಿ ಒಳಗೆ ಹೋದಳು.

ಅವರೆಲ್ಲರೂ ಮಾತಾಡಿಕೊಂಡದ್ದು, ಉತ್ತುಂಗ ನಿಗೆ ಅರ್ಥವಾಗಲಿಲ್ಲ. ಆ ಮನೆಯನ್ನು ನೋಡಿದರೆ, ಅದು ಆ ಹಟ್ಟಿಯ ನಾಯಕನದಾಗಿರಬೇಕು ಎಂದು ಅವನು ಊಹಿಸಿದನು. ಒಳಗೆ ಹೋದ

ಹೆಂಗಸು, ತಟ್ಟೆಯಂಥ ಒಂದು ಪಾತ್ರೆಯ ತುಂಬ ಯಾವುದೋ ಪಾನೀಯವನ್ನು ತಂದು ಉತ್ತುಂಗ ನಿಗೆ ಕೊಟ್ಟು, "ತುಂಬ ಬಳಲಿ ಹೋಗಿರುವೆ. ಇದನ್ನು ಕುಡಿ, ಕಾಬೂಯಿ ಬಂದ ಮೇಲೆ ಮಾತಾಡುತ್ತಾ ಊಟ ಮಾಡಬಹುದು'' ಎಂದಳು.

ಉತ್ತುಂಗನು ಪಾತ್ರೆಯನ್ನು ತೆಗೆದುಕೊಂಡು ಅದರಲ್ಲಿ ಇರುವ ಪಾನೀಯವನ್ನು ಕುಡಿದು ಪಾತ್ರೆ ಯನ್ನು ಪಕ್ಕಕ್ಕೆ ಇಟ್ಟನು. ಹತ್ತಿರವಿರುವ ಒಂದು ಕಂಬಕ್ಕೆ ಆತು ಕುಳಿತುಕೊಂಡು, ಯುವತಿಯರು ಮನೆಯ ಒಳಗೆ ತೆಗೆದುಕೊಂಡು ಹೋದ ಶತಾಬ್ದಿಕ ಪುಷ್ಪಗಳನ್ನು ಕುರಿತು ಆಲೋಚಿಸಲು ಆರಂಭಿಸಿ ದನು. "ಇಲ್ಲಿರುವ ಶತಾಬ್ದಿಕ ಪುಷ್ಪಗಳಿಂದ ಆಕರ್ಷಿತ ವಾದ ರಾಕ್ಷಸೀ ಮೃಗ ಸಮುದ್ರದಿಂದ ಇತ್ತ ಕಡೆ ಬಂದರೆ ಏನು ಮಾಡುವುದು? ಆದರೂ ಸಮುದ್ರ ತೀರದಲ್ಲಿ ಎತ್ತರವಾದ ಗೋಡೆ ಕಟ್ಟಿದ ಹಾಗೆ ಬಂಡೆಗಳು ಇವೆ. ಆ ಬಂಡೆಗಳನ್ನು ದಾಟಿ ರಾಕ್ಷಸೀ ಮೃಗ ಬರುವ ಅವಕಾಶ ಇಲ್ಲ. ಬಂಡೆಗಳ ಮಧ್ಯೆ ಸಣ್ಣದಾದ ಇಕ್ಕಟ್ಟಿನ ದಾರಿ ಮಾತ್ರ ಇದೆ. ಆ ಮಾರ್ಗದಿಂದ ರಾಕ್ಷಸೀ ಮೃಗ ಬರಲು ಸಾಧ್ಯ ವಿಲ್ಲ. ದೋಣಿ ತಲೆಕೆಳಗೆ ಆದಾಗ ಕೆಲವು ಹೂಗಳು ಸಮುದ್ರದಲ್ಲಿ ತೇಲಿ ಹೋದುವು. ಆ ಪುಷ್ಪಗಳಿಂದ ರಾಕ್ಷಸೀ ಮೃಗ ಪ್ರಸ್ತುತದಲ್ಲಿ ತೃಪ್ತಿ ಹೊಂದ ಬಹುದು. ಒಂದು ವೇಳೆ ಅವಶ್ಯಕತೆ ಇದ್ದರೆ ಇಲ್ಲಿಯ ಪ್ರಜೆಗಳು ತನಗೆ ಸಹಾಯ ಮಾಡ ಬಹುದೇ?''

ಭುಜಗಳನ್ನು ಯಾರೋ ಬಲವಾಗಿ ತಟ್ಟಲು ಉತ್ತುಂಗನು ಆಲೋಚನೆಗಳಿಂದ ಹೊರಗೆ ಬಂದು, ತಲೆ ತಿರುಗಿಸಿ ನೋಡಿದನು.

ಎ ದುರಲ್ಲಿ ನಿಂತ ಒಬ್ಬ ದೃಢಕಾಯನು "ಯಾರು ನೀನು'' ಎಂದು ಕೇಳಿದನು.

ಉತ್ತುಂಗನಿಗೆ ಆ ಪ್ರಶ್ನೆ ಅರ್ಥವಾಗಲಿಲ್ಲ. ಆದರೂ ಅವನು "ಮಾಣಿಕ್ಯಪುರಿ ರಾಜ್ಯದ ಶೃಂಗ್ಮಾಯ್ ಬೆಟ್ಟಗಳಿಂದ ಬರುತ್ತಿದ್ದೇನೆ. ನನ್ನ ಹೆಸರು ಉತ್ತುಂಗನೆಂದು'' ಎಂದನು.

"ಶೃಂಗ್ಮಾಯ್ ಬೆಟ್ಟಗಳಿಂದ ಬರುತ್ತಿರುವೆಯಾ? ತುಂಬ ಸಂತೋಷ. ಒಳಗೆ ಹೋಗೋಣ, ಬಾ'' ಎಂದು ಆ ದೃಢಕಾಯನು ಮನೆಯ ಒಳಗೆ ನಡೆದನು.

ಅವನಿಗೆ ತಮ್ಮ ಭಾಷೆ ತಿಳಿಯುವುದೆಂದು ಗ್ರಹಿಸಿದ ಉತ್ತುಂಗನು ಬಹಳ ಆನಂದದಿಂದ ಎದ್ದು ನಿಂತನು.

(ಇನ್ನೂ ಇದೆ)





# ವಿಚಿತ್ರಪುಷ್ಪ

೮

[ಶತಾಬ್ದಿಕ ಪುಷ್ಪಗಳೊಂದಿಗೆ ದೋಣಿಯಲ್ಲಿ ಪ್ರಯಾಣ ಮಾಡುತ್ತಿದ್ದ ಉತ್ತುಂಗನಿಗೆ ಅರ್ಧರಾತ್ರಿ ಸಮಯದಲ್ಲಿ ಸಮುದ್ರದ ಮಧ್ಯೆ ರಾಕ್ಷಸೀ ಮೃಗ ಕಂಡಿತು. ಉತ್ತುಂಗನು ಭೂಪ್ರದೇಶಕ್ಕಾಗಿ ಹುಡುಕು ತ್ತಿರಲು ಒಂದು ದೊಡ್ಡ ಅಲೆ ಬಂದು ದೋಣಿಯನ್ನು ತೀರಕ್ಕೆ ಬೀಸಿ ಹೊಡೆಯಿತು. ಅವನು ನಿದ್ದೆ ಮಾಡುತ್ತಿರಲು ಕೆಲವು ಕಾಡಿನ ಯುವತಿಯರು ಬಂದು ಶತಾಬ್ದಿಕ ಹೂಗಳನ್ನು ತೆಗೆದುಕೊಂಡು ತಮ್ಮ ನಿವಾಸ ಸ್ಥಾನಕ್ಕೆ ಹೊರಟರು. ಉತ್ತುಂಗನು ಸಹಾ ಅವರೊಂದಿಗೆ ಹೊರಟನು]

"ಶೃಂಗ್ಮಾಯ್ ಬೆಟ್ಟಗಳ ಪ್ರಾಂತ್ಯದಿಂದ ಇಷ್ಟು ದೂರ ಇಲ್ಲಿಗೆ ಏಕಾಂಗಿಯಾಗಿ ಹೇಗೆ ಬಂದೆ?" ಎಂದು ಹೇಳುತ್ತಾ ಕುಳಿತುಕೊಳ್ಳಲು ಹಾಸಿದ್ದ ಚಾಪೆಯನ್ನು ತೋರಿಸಿದ ಆ ದೃಢಕಾಯನು.

ಉತ್ತುಂಗನು ಚಾಪೆಯ ಮೇಲೆ ಕುಳಿತುಕೊಳ್ಳುತ್ತಾ "ನಾನು ಮಾಣಿಕ್ಯಪುರಿಯ ದಕ್ಷಿಣ ಸುರಹದ್ದಿನಿಂದ ನಿನ್ನೆ ಸಾಯಂಕಾಲ ದೋಣಿಯಲ್ಲಿ ಹೊರಟೆ. ಬೆಳಗಾಗುತ್ತಿರಲು ಒಂದು ದೊಡ್ಡ ಅಲೆ ಬಂದು ನನ್ನ ದೋಣಿಯನ್ನು ತೀರಕ್ಕೆ ಬೀಸಿ ಎಸೆದ ಕಾರಣ, ದಡದ ಮೇಲೆ ಬಿದ್ದೆ. ಅಷ್ಟಲ್ಲದೆ ಇಲ್ಲಿಗೆ ನಾನು ಯಾವ ಉದ್ದೇಶದಿಂದಲೂ ಬರಲಿಲ್ಲ" ಎಂದನು.

ಅಷ್ಟರಲ್ಲಿ ಗುಡಿಸಲಿನ ಒಳಕೋಣೆಯಿಂದ, ನಡುವಯಸ್ಸಿನ ಹೆಂಗಸು ಎರಡು ಅಗಲವಾದ ಪಾತ್ರೆಗಳಲ್ಲಿ ಯಾವುದೋ ಪಾನೀಯವನ್ನು ತುಂಬಿಸಿ ತಂದು ಅವರ ಮುಂದೆ ಇಟ್ಟು ಒಳಗೆ ಹೊರಟು ಹೋದಳು.

ದೃಢಕಾಯನು ತಾನೊಂದು ಪಾತ್ರೆಯನ್ನು ತೆಗೆದುಕೊಂಡು ಉತ್ತುಂಗನಿಗೆ ಮತ್ತೊಂದು ಪಾತ್ರೆ



ಯನ್ನು ತೋರಿಸುತ್ತಾ "ತೆಗೆದುಕೋ'' ಎಂದನು.

"ನಾನು ಇಲ್ಲಿಗೆ ಬಂದಾಗ ಆಕೆ ನನಗೆ ಪಾನೀಯವನ್ನು ಕೊಟ್ಟು ನನ್ನ ಹಸಿವನ್ನು ತಣಿಸಿದಳು'' ಎಂದು ಪಾತ್ರೆಯನ್ನು ತೆಗೆದುಕೊಂಡನು ಉತ್ತುಂಗ.

"ಇಲ್ಲಿಗೆ ಯಾವಾಗ ಬಂದೆ'' ಎಂದು ಕೇಳಿದನು ದೃಢಕಾಯ.

"ನಾನು ಇಲ್ಲಿಗೆ ಬರಲಿಲ್ಲ. ನನ್ನನ್ನು ಇಲ್ಲಿಗೆ ಕರೆದುಕೊಂಡು ಬಂದರು'' ಎಂದ ಉತ್ತುಂಗ.

"ಯಾರು ಕರೆದುಕೊಂಡು ಬಂದರು?'' ಎಂದು ಕೇಳಿದ ದೃಢಕಾಯನು.

ಪಾತ್ರೆಯಲ್ಲಿದ್ದ ಪಾನೀಯವನ್ನು ಕುಡಿದು ಪಾತ್ರೆಯನ್ನು ಕೆಳಗೆ ಇಡುತ್ತಾ "ದಡದ ಮೇಲೆ ದೋಣಿಯೊಂದಿಗೆ ಬಿದ್ದ ನಾನು ಆಗಲೇ ಆಯಾಸದಿಂದ ಬಳಲಿದ್ದೆ. ಸ್ವಲ್ಪ ಸಮಯ ವಿಶ್ರಾಂತಿ ತೆಗೆದುಕೊಳ್ಳಬೇಕೆಂದು ಕಣ್ಣು ಮುಚ್ಚಿ ಮಲಗಿದೆ. ನನಗೆ ಎಚ್ಚರವಾದಾಗ ನನ್ನ ಸುತ್ತಲೂ ಕೆಲವರು ಯುವತಿಯರು ನಿಂತಿದ್ದರು. ದೋಣಿಯಲ್ಲಿ ನಾನು ತೆಗೆದುಕೊಂಡು ಬಂದಿದ್ದ ಹೂಗಳನ್ನು ಕೈಯಲ್ಲಿ ಹಿಡಿದು ಅವರೆಲ್ಲರೂ ನಿಂತಿದ್ದರು. ಅವರ ಮಾತುಗಳು ನನಗೆ ಅರ್ಥವಾಗಲಿಲ್ಲ. ಆದರೆ ಅವರು ಮಾಡಿದ ಸನ್ನೆಗಳನ್ನು ಅರ್ಥ ಮಾಡಿಕೊಂಡು ಅವರ ಹಿಂದೆ ಇಲ್ಲಿಗೆ ಬಂದೆ'' ಎಂದ ಉತ್ತುಂಗ.

ಅಷ್ಟರಲ್ಲಿ ಒಳಗೆ ಹೋದ ಹೆಂಗಸು, ಹೂವಿನ ಕಟ್ಟನ್ನು ತಂದು ದೃಢಕಾಯನ ಮುಂದೆ ಇಟ್ಟು "ಕಾಬೂಯಿ! ನಮ್ಮ ಹುಡುಗಿ ಈ ಹೂಗಳನ್ನು ತಂದಳು. ಅಂದವಾಗಿವೆ ಅಲ್ಲವೇ?'' ಎಂದಳು.

"ಚೆನ್ನಾಗಿವೆ. ಆದರೂ ನಮ್ಮ ಹುಡುಗಿ ಅವುಗಳನ್ನು ಏಕೆ ತಂದಳು?'' ಎಂದು ಕೇಳಿದ ದೃಢಕಾಯ.

"ಅವು ಸುವಾಸನೆ ಬೀರುತ್ತಿವೆ. ಅದಕ್ಕೆ ತುಂಬ ಇಷ್ಟಪಟ್ಟು ತಂದಿದ್ದಾಳೆ'' ಎಂದಳು ಆ ಹೆಂಗಸು.

"ಈ ಯುವಕನು ಅವುಗಳನ್ನು ಎಲ್ಲಿಗೋ ತೆಗೆದುಕೊಂಡು ಹೋಗುತ್ತಿದ್ದಾನೆ. ಹಾಗಿರುವಾಗ ಅವುಗಳನ್ನು ಇಲ್ಲಿಗೆ ಏಕೆ ತೆಗೆದುಕೊಂಡು ಬರಬೇಕು?'' ಎಂದು ಕೇಳಿದ ದೃಢಕಾಯ.

ಆ ಹೆಂಗಸು ಏನನ್ನೂ ಹೇಳದೆ, ಮೌನವಾಗಿ ಒಳಗೆ ಹೊರಟು ಹೋದಳು. ಅವರ ಮಾತುಗಳು ಅರ್ಥವಾಗದಿದ್ದರೂ "ಕಾಬೂಯಿ'' ಅಂದರೆ ನಾಯಕನು ಎಂಬ ವಿಷಯವನ್ನು ಮಾತ್ರ ಗ್ರಹಿಸಿದನು ಉತ್ತುಂಗನು.

"ಅವುಗಳನ್ನು 'ಶತಾಬ್ದಿಕ' ಹೂಗಳೆಂದು ಕರೆಯುತ್ತಾರೆ. ಒಂದು ಮುಖ್ಯವಾದ ಕಾರ್ಯದ ನಿಮಿತ್ತ ಈ ಹೂವುಗಳನ್ನು ದೂರ ಪ್ರಾಂತ್ಯಕ್ಕೆ ತೆಗೆದುಕೊಂಡು ಹೋಗುತ್ತಿದ್ದೇನೆ'' ಎಂದ ಉತ್ತುಂಗನು

ನಿಜವಾದ ವಿಷಯವನ್ನು ಬಹಿರಂಗ ಪಡಿಸದೆ.

"ನಿಮ್ಮ ಮಾಣಿಕ್ಯಪುರಿಗೆ ಸಮೀಪದಲ್ಲಿರುವ ನಮ್ಮ ರಾಜ್ಯವನ್ನು 'ನಾಗಪುರಿ' ಎಂದು ಕರೆಯುತ್ತಾರೆ. ಇಲ್ಲಿಂದ ನೀನು ಇನ್ನು ಎಷ್ಟು ದೂರ ಹೋಗಬೇಕು? ಅಷ್ಟರಲ್ಲಿ ಈ ಹೂಗಳು ಬಾಡಿ ಹೋಗುವುದಿಲ್ಲವೇ?" ಎಂದನು ಕಾಬೂಯಿ. ಉತ್ತುಂಗನಿಂದ ಎಲ್ಲ ವಿಷಯಗಳನ್ನೂ ಅರಿತುಕೊಳ್ಳಬೇಕೆಂಬ ಉದ್ದೇಶವಾಗಿತ್ತು ಅವನದು.

ಉತ್ತುಂಗನು ಸಹಾ ಇನ್ನು ವಿಷಯವನ್ನು ಮುಚ್ಚಿಡುವುದರಿಂದ ಪ್ರಯೋಜನ ಇಲ್ಲವೆಂದು ಗ್ರಹಿಸಿ, ತನ್ನ ಪ್ರಯಾಣದ ಬಗ್ಗೆ ಎಲ್ಲವನ್ನೂ ಕ್ಲುಪ್ತವಾಗಿ ಕಾಬೂಯಿಗೆ ವಿಮರಿಸಿ ಹೇಳಿದನು. ಎಲ್ಲವನ್ನೂ ಕೇಳಿದ ಕಾಬೂಯಿ, "ರಾಕ್ಷಸೀ ಮೃಗವನ್ನು ನಡುಸಮುದ್ರದಲ್ಲಿ ಎದುರಿಸಲು ಸಿದ್ಧನಾಗಿರುವ ನಿನ್ನ ಸಾಹಸವನ್ನು ಮೆಚ್ಚಬೇಕಾದದ್ದೇ, ಆಪತ್ತಿನಲ್ಲಿ ಸಿಲುಕಿರುವ ನಿನ್ನ ರಾಜ್ಯದ ಪ್ರಜೆಗಳನ್ನು ಕಾಪಾಡಲು ಹೊರಟಿರುವ ನೀನು ಆದರ್ಶ ಯುವಕ. ಆದರೆ ಆ ರಾಕ್ಷಸೀ ಮೃಗದಿಂದ ನಮ್ಮ ನಾಗಪುರಿಗೆ ಯಾವ ವಿಧವಾದ ಆಪತ್ತೂ ಇಲ್ಲ. ಏಕೆಂದರೆ ನಮ್ಮ ರಾಜ್ಯದ ಸುತ್ತಲೂ ಎತ್ತರವಾದ ಪರ್ವತಗಳು ಕೋಟೆಯ ಗೋಡೆಗಳಂತೆ ಇವೆ. ಅದು ಪ್ರಕೃತಿ ನಮಗೆ ನೀಡಿರುವ ವರಪ್ರಸಾದ. ನಮ್ಮ ರಾಜ್ಯಕ್ಕೆ ಶತ್ರುಗಳ ಕಾಟವಿಲ್ಲ. ನಾವು ಸುಖಶಾಂತಿಗಳಿಂದ ಬಾಳುತ್ತಿದ್ದೇವೆ" ಎಂದನು.

"ನಿಜ, ಆದರೆ ನಮ್ಮ ಮಾಣಿಕ್ಯಪುರಿಗೆ ಬಹು ದೀರ್ಘವಾದ ಸಮುದ್ರ ತೀರ ಇದೆ. ಅದಕ್ಕೆ ರಾಕ್ಷಸೀ ಮೃಗ ನಾನಾ ಭೀಭತ್ಸಗಳನ್ನು ಸೃಷ್ಟಿಸುತ್ತಿದೆ. ಆದ್ದರಿಂದ ಅದರ ನಿವಾಸ ಸ್ಥಳಕ್ಕೇ ಈ ಹೂಗಳನ್ನು ತಲುಪಿಸಿದರೆ ಒಳ್ಳೆಯದು. ಇದಲ್ಲದೇ ಅನ್ಯ ಮಾರ್ಗ ನಮಗೆ ಕಾಣುತ್ತಿಲ್ಲ" ಎಂದನು ಉತ್ತುಂಗ.



"ನಿಮ್ಮ ಬೆಟ್ಟಗಳಲ್ಲಿ ಅರಳಿದ ಶತಾಬ್ದಿಕ ಹೂಗಳನ್ನು ಕೀಳಲು ಎಲ್ಲ ಮರಗಳನ್ನು ಬುಡ ಸಹಿತ ಬೀಳಿಸಿದರೆಂದು, ಅವು ಮತ್ತೆ ಹೂ ಬಿಡಲು ನೂರು ವರ್ಷಗಳು ಆಗಬಹುದೆಂದೂ ಈಗ ತಾನೇ ನೀನು ಹೇಳಿದೆ ಅಲ್ಲವೇ? ಮತ್ತೆ ಹೂವಿಗಾಗಿ ರಾಕ್ಷಸೀ ಮೃಗ ಮಾಣಿಕ್ಯಪುರಿಗೆ ಬರುವ ಅವಕಾಶವೇ ಇಲ್ಲವಲ್ಲಾ" ಎಂದು ಕೇಳಿದನು ಕಾಬೂಯಿ.

"ನೀವು ಹೇಳಿದ್ದು ನಿಜವೇ ಆದರೂ ಆ ದುಷ್ಟ ಮೃಗವನ್ನು ನಮ್ಮ ರಾಜ್ಯದಿಂದ ಆದಷ್ಟು ದೂರ ತೊಲಗಿಸಿ ಬಿಟ್ಟು ಬರಬೇಕೆಂಬ ನಿರ್ಧಾರ ಮಾಡಿಕೊಂಡಿದ್ದೇನೆ" ಎಂದ ಉತ್ತುಂಗ.

"ನಿನ್ನ ಪ್ರಯತ್ನ ಪ್ರಶಂಸನೀಯವಾದದ್ದೇ. ಆದರೂ ಆ ರಾಕ್ಷಸೀಮೃಗ ನಿಮ್ಮ ರಾಜ್ಯಕ್ಕೆ ಬರದಂತೆ ಮಾಡಲು ಮತ್ತೇನಾದರೂ ಮಾರ್ಗ



ಏದೆಯೋ ಎಂದು ಆಲೋಚಿಸುವುದು ಒಳ್ಳೆಯ ದೆಂಬುದು ನನ್ನ ಅಭಿಪ್ರಾಯ. ಈ ವಿಷಯಗಳನ್ನು ನಮ್ಮ ರಾಜರಿಗೆ ಹೇಳಿ ಅವರ ಸಲಹೆಯನ್ನು ಕೇಳುವುದು ಎಲ್ಲಾ ವಿಧದಲ್ಲೂ ಒಳ್ಳೆಯದೆಂದು ಭಾವಿಸುತ್ತೇನೆ. ಊಟ ಮಾಡಿ ಈ ದಿನವೇ ನಿನ್ನನ್ನು ನಮ್ಮ ಅರಸರಾದ ಮಹೇಂದ್ರಸಿಂಹನ ಬಳಿಗೆ ಕರೆದುಕೊಂಡು ಹೋಗುತ್ತೇನೆ'' ಎಂದು ಉತ್ತುಂಗನಿಗೆ ಹೇಳಿ ಒಳಗಿನ ಬಾಗಿಲು ತಟ್ಟಿದ ಕಾಬೂಯಿ.

ಮನೆಯ ಒಳಗಿಂದ ಆ ಸ್ತ್ರೀ ಹೊರಗೆ ಬಂದಳು. ಕಾಬೂಯಿ ಏನೋ ಹೇಳಿದ ಆಕೆ ಒಳಗೆ ಹೋಗಿ ಮರುಕ್ಷಣವೇ ಆಹಾರ ಪದಾರ್ಥಗಳನ್ನು ತಂದು, ಉತ್ತುಂಗನ ಮುಂದೆ ಇಟ್ಟಳು. ಅವಳ ಹಿಂದೆ ಮತ್ತೊಬ್ಬ ಯುವತಿ ಸಹಾ ಬಂದಳು. ಪಾತ್ರೆಗಳನ್ನು ಇಟ್ಟು ಅವಳು ಒಳಗೆ ಹೋಗುತ್ತಿರಲು ಕಾಬೂಯಿ ಅವಳನ್ನು 'ಚಿತ್ರಾ' ಎಂದು ಕರೆದನು. ಅವಳು ನಿಂತು, 'ಕರೆದಿರಾ' ಎಂದು ಕಾಬೂಯಿ ಕಡೆ ತಿರುಗಿ ನೋಡಿದಳು.

"ಹೌದು. ಹೀಗೆ ಬಾ'' ಎಂದು ಕಾಬೂಯಿ ಉತ್ತುಂಗನತ್ತ ತಿರುಗಿ "ಇವಳು ನಮ್ಮ ಮಗಳು ಚಿತ್ರ'' ಎಂದು ಹೇಳಿ, ಚಿತ್ರಗಳನ್ನು ನೋಡಿ "ಮಿಕ್ಕವರೆಲ್ಲಾ ಎಲ್ಲಿ'' ಎಂದು ಕೇಳಿದನು.

ಅವಳು ಮೆಲ್ಲನೆ ಬಾಗಿಲನ್ನು ಎರಡು ಮೂರು ಬಾರಿ ತಟ್ಟಿದಳು. ಒಳಗಿನಿಂದ ಐದು ಜನ ಯುವತಿಯರು ಅಲ್ಲಿಗೆ ಬಂದರು.

ಕಾಬೂಯಿ ಉತ್ತುಂಗನೊಂದಿಗೆ "ಇವರೆಲ್ಲರೂ ಚಿತ್ರಳ ಗೆಳತಿಯರು'' ಎಂದು ಹೇಳಿ, ಅವರ ಕಡೆ ತಿರುಗಿ ನೋಡಿ "ಈ ಹೂಗಳನ್ನು ದೋಣಿಯಿಂದ ಏಕೆ ತೆಗೆದುಕೊಂಡು ಬಂದಿರಿ?'' ಎಂದು ಕೇಳಿದನು.

"ಹೂವುಗಳು ತುಂಬ ಸುಂದರವಾಗಿವೆ. ಒಳ್ಳೆ ವಾಸನೆಯೂ ಬರುತ್ತಿದೆ. ಅದಕ್ಕೆ ತೆಗೆದುಕೊಂಡು ಬಂದೆವು'' ಎಂದರು ಅವರು ಉತ್ತುಂಗನತ್ತ ತತ್ಪರರಾಗಿ ನೋಡುತ್ತಾ.

"ಸರಿ, ಒಳಗೆ ಹೋಗಿ'' ಎಂದ ಕಾಬೂಯಿ.

"ಆಯ್ತು'' ಎಂದು ಆ ಯುವತಿಯರು ಒಳಗೆ ಹೋದರು.

ಊಟ ಮಾಡಿ, ಕಾಬೂಯಿ, ಉತ್ತುಂಗರಿಬ್ಬರೂ ರಾಜ ದರ್ಶನಕ್ಕೆ ಹೊರಟರು. ಕಾಬೂಯಿಯ ಹೆಂಡತಿ, ಮಗಳು ಬಾಗಿಲವರೆಗೂ ಬಂದು ಅವರನ್ನು ಕಳುಹಿಸಿ ಕೊಟ್ಟರು.

ಹಟ್ಟಿಯನ್ನು ದಾಟುತ್ತಲೇ ಕಾಬೂಯಿ ತನ್ನ ಕೈಯಲ್ಲಿ ಇದ್ದ ಹೂವಿನ ಗುಚ್ಛವನ್ನು ಉತ್ತುಂಗನ ಕೈಗೆ ಕೊಟ್ಟು "ಇದು ನಿನ್ನ ಹತ್ತಿರವೇ ಇರಲಿ'' ಎಂದು ಮುಂದೆ ನಡೆಯಲು ಆರಂಭಿಸಿದನು.

ಆ ಹೂಗಳನ್ನು ತೆಗೆದುಕೊಂಡು ಉತ್ತುಂಗನು

ಮೌನವಾಗಿ ಕಾಬೂಯಿಯ ಹಿಂದೆ ನಡೆದನು. ಅವರು ಹಾಗೆ ಬಹಳ ದೂರ ಹೋಗಿ ಹಳ್ಳ ದಿಣ್ಣೆ ಇರುವ ಒಂದು ಬೆಟ್ಟವನ್ನು ದಾಟಿ, ಮತ್ತೆ ಸ್ವಲ್ಪ ದೂರ ನಡೆದು ನಾಗಪುರಿ ರಾಜಧಾನಿಯನ್ನು ಸಮೀಪಿಸಿದರು.

ರಾಜಧಾನಿ ನಗರದ ಬೀದಿಗಳಲ್ಲಿ ನಡೆಯುತ್ತಿರಲು, ಪ್ರಜೆಗಳು ಕೆಲವರು ಕಾಬೂಯಿಯನ್ನು ಗೌರವದಿಂದ ಮಾತನಾಡಿಸಿದರು. ಎದುರಲ್ಲಿ ಬರುತ್ತಿದ್ದ ಕೆಲವರು, ಪಕ್ಕಕ್ಕೆ ಸರಿದು ಅವರಿಗೆ ದಾರಿ ಕೊಟ್ಟರು. ಅಜಾನುಬಾಹುವಾದ ಕಾಬೂಯಿಯ ಗಂಭೀರ ರೂಪ, ಆತನ ತಲೆಯ ಮೇಲಿರುವ ಚಿಕ್ಕ ನಾಗ ಕಿರೀಟ, ವಿಚಿತ್ರ ವೇಷಧಾರಣೆ, ಕೈಯಲ್ಲಿ ದೊಡ್ಡ ಭಲ್ಲೆಗಳನ್ನು ಕಂಡು ಎದುರಿಗೆ ಬರುತ್ತಿರುವವರು ಭಯಗೊಳ್ಳುತ್ತಿರುವರೆಂದು ಉತ್ತುಂಗನು ಗ್ರಹಿಸಿದನು.



ಅವರು ರಾಜಪ್ರಾಸಾದವನ್ನು ಸಮೀಪಿಸಲು ಕಾವಲು ಭಟರು ಕಾಬೂಯಿಗೆ ನಮಸ್ಕರಿಸಿದರು. ಒಬ್ಬ ಭಟನು ಅವರನ್ನು ರಾಜಪ್ರಾಸಾದದ ಒಳಗೆ ಕರೆದುಕೊಂಡು ಹೋದನು. ಎರಡು ಕಡೆಗಳಲ್ಲೂ ದೊಡ್ಡ ಸ್ತಂಭಗಳೊಂದಿಗೆ ಮಾರ್ಗ ವಿಶಾಲವಾಗಿತ್ತು. ಅವರನ್ನು ಒಂದು ಕಡೆ ನಿಲ್ಲುವಂತೆ ಹೇಳಿ ಭಟನು ಮಾತ್ರ ಒಳಗೆ ಹೋಗಿ, ಅವರು ಬಂದಿರುವ ಸುದ್ದಿಯನ್ನು ರಾಜರಿಗೆ ತಿಳಿಸಿ, ಕಾಬೂಯಿ ಮತ್ತು ಉತ್ತುಂಗನನ್ನು ಕರೆದುಕೊಂಡು ರಾಜರ ಹತ್ತಿರ ಹೋದನು.

ರಾಜನು ಉನ್ನತಾಸನದ ಮೇಲೆ ಕುಳಿತು ಮಂತ್ರಿಗಳೊಂದಿಗೆ ಏನನ್ನೋ ಚರ್ಚಿಸುತ್ತಿದ್ದನು. ಅರಸನನ್ನು ನೋಡುತ್ತಲೇ ಕಾಬೂಯಿ ಕೈ ಜೋಡಿಸಿ ಬಾಗಿ ನಮಸ್ಕರಿಸಿದನು.

"ಕಾಬೂಯಿ, ನಿಮ್ಮ 'ಕಾಬಾ' ಜನಾಂಗದ ಪ್ರಜೆಗಳು ಎಲ್ಲರೂ ಯಾವ ಕೊರತೆಯೂ ಇಲ್ಲದೆ, ಕ್ಷೇಮವಾಗಿ ಇದ್ದಾರಲ್ಲವೇ?'' ಎಂದು ಪರಾಮರ್ಶಿಸಿದನು ರಾಜನು ಮಂದಹಾಸದಿಂದ.

"ತಮ್ಮ ದಯೆಯಿಂದ ಎಲ್ಲರೂ ಕ್ಷೇಮವಾಗಿ ಇದ್ದೇವೆ ಪ್ರಭೂ'' ಎಂದನು ಕಾಬೂಯಿ.

ರಾಜನ ದೃಷ್ಟಿ ಉತ್ತುಂಗನ ಮೇಲೆ ಬಿದ್ದಿತು. ಉತ್ತುಂಗನು ಕಾಬೂಯಿ ಮಾಡಿದಂತೆ, ಕೈ ಜೋಡಿಸಿ ಬಾಗಿ ರಾಜನಿಗೆ ನಮಸ್ಕರಿಸಿದನು.

"ಈ ಯುವಕನು ಮಾಣಿಕ್ಯಪುರಿ ರಾಜ್ಯದಿಂದ ಬಂದಿರುವನು. ಹೆಸರು ಉತ್ತುಂಗನೆಂದು'' ಎಂದನು ಕಾಬೂಯಿ.

"ಹೌದೇ? ನಿಮ್ಮ ಅರಸನಾದ ಪ್ರತಾಪವರ್ಮರು ಕ್ಷೇಮದಿಂದ ಇರುವರೇ?'' ಎಂದು ಕೇಳಿದ ರಾಜ.

"ಕ್ಷೇಮವಾಗಿದ್ದಾರೆ ಪ್ರಭೂ'' ಎಂದು ವಿನಯದಿಂದ ಉತ್ತರಿಸಿದ ಉತ್ತುಂಗ.



ಪಕ್ಕದಲ್ಲಿರುವ ಆಸನಗಳಲ್ಲಿ ಕುಳಿತುಕೊಳ್ಳುವಂತೆ ರಾಜನು ಕೈ ತೋರಿಸಲು, ಇಬ್ಬರೂ ಆ ಆಸನಗಳ ಮೇಲೆ ಕುಳಿತುಕೊಂಡರು.

"ಉತ್ತುಂಗನು ಎದಿರು ನೋಡದೆ ನಮ್ಮ ರಾಜ್ಯಕ್ಕೆ ಬಂದು ತಲುಪಿದ್ದಾನೆ" ಎಂದು ಕಾಬೂಯಿ ಉತ್ತುಂಗನ ಕೈಯಲ್ಲಿ ಇದ್ದ ಹೂಗೊಂಚಲನ್ನು ತೆಗೆದು ರಾಜನ ಮುಂದಿಟ್ಟನು.

"ನೀವು ಒಳಗೆ ಬರುತ್ತಲೇ ವಿಚಿತ್ರವಾದ ಪರಿಮಳ ಬೀಸಿತು. ಅದಕ್ಕೆ ಇದೇ ಕಾರಣವೇನು?" ಎಂದು ಕೇಳಿದ ರಾಜ.

"ಉತ್ತುಂಗನು ಇವುಗಳನ್ನು 'ಶೃಂಗ್ಮಾಯ್' ಬೆಟ್ಟಗಳಿಂದ ತಂದಿರುವನು. ಇವು ನೂರು ವರ್ಷಕ್ಕೆ ಒಮ್ಮೆ ಮಾತ್ರ ಅರಳುವ ಪುಷ್ಪಗಳಂತೆ. ಅದಕ್ಕೆ ಇವುಗಳನ್ನು 'ಶತಾಬ್ದಿಕ' ಪುಷ್ಪಗಳೆಂದು ಕರೆಯುತ್ತಾರಂತೆ" ಎಂದನು ಕಾಬೂಯಿ.

"ಹೌದೇನು? ಮಾಣಿಕ್ಯಪುರಿ ರಾಜ ಪ್ರತಾಪವರ್ಮರು ನಮಗಾಗಿ ಇವುಗಳನ್ನು ಅಷ್ಟು ದೂರದಿಂದ ಕಳುಹಿಸಿರುವರೇ?" ಎಂದನು ರಾಜ ಬಹಳ ಆಶ್ಚರ್ಯದಿಂದ.

"ಅಲ್ಲ ಪ್ರಭೂ" ಎಂದು ಕಾಬೂಯಿ ಶತಾಬ್ದಿಕ ಹೂಗಳಿಂದ ಮಾಣಿಕ್ಯಪುರಿಗೆ ಬಂದಿರುವ ಆಪತ್ತಿನ ಬಗ್ಗೆ, ರಾಕ್ಷಸೀ ಮೃಗವನ್ನು ಹುಡುಕುತ್ತಾ ಹೊರಟಿರುವ ಉತ್ತುಂಗನ ಪ್ರಯಾಣದ ಬಗ್ಗೆ ಸ್ಪಷ್ಟವಾಗಿ ವಿವರಿಸಿ "ಇದನ್ನು ತಮಗೆ ತಿಳಿಸಿ ತಮ್ಮ ಸಲಹೆ ಪಡೆಯುವುದು ಒಳ್ಳೆಯದೆಂದು ಉತ್ತುಂಗನನ್ನು ಕರೆದುಕೊಂಡು ಬಂದಿದ್ದೇನೆ ಪ್ರಭೂ!" ಎಂದನು.

"ಪ್ರಜೆಗಳ ಕ್ಷೇಮಕ್ಕಾಗಿ ಉತ್ತುಂಗನು ಮಾಡುತ್ತಿರುವ ಸಾಹಸ ಪ್ರಶಂಸನೀಯ. ಆದರೆ ಆತ ಆ ರಾಕ್ಷಸೀ ಮೃಗವನ್ನು ಎದುರಿಸಲು ಒಬ್ಬಂಟಿಗನಾಗಿ ಹೋಗುವುದು ಅಷ್ಟು ಕ್ಷೇಮವಲ್ಲ. ಈ ಸಾಹಸ ವೀರನಿಗೆ ಬೆಂಬಲವಾಗಿ ನಿಲ್ಲಲು ನಮ್ಮ ಕೆಲವು ವೀರರನ್ನು ಕಳುಹಿಸುವ ಏರ್ಪಾಡು ಮಾಡೋಣ" ಎಂದನು ರಾಜ.

ಅಷ್ಟರಲ್ಲಿ ಹದಿನೈದು ವರ್ಷದ ಹುಡುಗಿ ಒಬ್ಬಳು "ಅಪ್ಪಾ! ಈ ಹೂಗಳು ಎಲ್ಲಿಂದ ಬಂದುವು? ಇವು ತುಂಬಾ ಅಂದವಾಗಿವೆ" ಎಂದು ಹೇಳುತ್ತಾ ಅಲ್ಲಿಗೆ ಬಂದಳು.

ರಾಜನು ಅವಳನ್ನು ಅಪ್ಯಾಯತೆಯಿಂದ ಹತ್ತಿರಕ್ಕೆ ಕರೆದುಕೊಂಡು "ಇವುಗಳನ್ನು ಮಾಣಿಕ್ಯಪುರಿಯಿಂದ ನಿನಗಾಗಿ ಆ ಯುವಕನು ತೆಗೆದುಕೊಂಡು ಬಂದಿರುವನು" ಎಂದನು ಮೆಲ್ಲನೆ ನಗುತ್ತ.

"ನಿಜವೇ! ನನಗಾಗಿ ತಂದಿರುವೆಯಾ?" ಎಂದು ಆ ಹೆಣ್ಣು ಉತ್ತುಂಗನತ್ತ ಅಚ್ಚರಿಯಿಂದ ನೋಡಿದಳು.

ಏನು ಹೇಳಬೇಕೆಂದು ತಿಳಿಯದೆ, ಉತ್ತುಂಗನು ಚಿಕ್ಕದಾಗಿ ನಕ್ಕನು.

ರಾಜನು ಅವನೊಂದಿಗೆ, "ಇವಳು ನನ್ನ ಮಗಳು ಮಲ್ಲಿಕಾ. ಇವಳಿಗೆ ಹೂವುಗಳೆಂದರೆ ಪ್ರಾಣ'' ಎಂದನು.

"ಹೌದು ಯುವರಾಣಿ! ಈ ಹೂಗಳನ್ನು ನಿಮಗಾಗಿಯೇ ತೆಗೆದುಕೊಂಡು ಬಂದಿದ್ದೇನೆ'' ಎಂದನು ಉತ್ತುಂಗ.

"ಇವುಗಳನ್ನು ನಾನು ತೆಗೆದುಕೊಳ್ಳುತ್ತೇನೆ ಅಪ್ಪಾ'' ಎಂದಳು ಮಲ್ಲಿಕ ತಂದೆಯೊಂದಿಗೆ.

"ಆಗಲಮ್ಮಾ! ನೀನು ಒಳಗೆ ಹೋಗು. ನಾನು ಈಗಲೇ ಬರುತ್ತೇನೆ'' ಎಂದು ರಾಜನು ಹೇಳಿದ ಒಡನೆಯೇ, ಮಲ್ಲಿಕ ಹೂಗಳನ್ನು ತೆಗೆದುಕೊಂಡು ಸಂತೋಷದಿಂದ ಒಳಗೆ ಹೊರಟು ಹೋದಳು.

ರಾಜನು "ಆ ಪುಷ್ಪಗಳಿಗೆ ಇರುವ ಶಾಪದ ಬಗ್ಗೆಯಾಗಲೀ, ರಾಕ್ಷಸೀ ಮೃಗದ ಬಗ್ಗೆ ಆಗಲೀ, ಯುವರಾಣಿಗೆ ತಿಳಿಯಬಾರದು'' ಎಂದು ತುಸು ಸಮಯ ಮೌನವಾಗಿ ಆಲೋಚಿಸಿ "ಕಾಬೂಯಿ, ನೀವಿಬ್ಬರೂ ಈ ರಾತ್ರಿ ಇಲ್ಲೇ ಉಳಿದು ವಿಶ್ರಾಂತಿ ಪಡೆಯಿರಿ. ರಾಕ್ಷಸೀ ಮೃಗವನ್ನು ಕುರಿತು ಏನು ಮಾಡಬೇಕೆಂದು ನಾಳೆ ನಿರ್ಧಾರ ಮಾಡೋಣ'' ಎಂದು ಹೇಳಿ ಅಲ್ಲಿಂದ ಎದ್ದು ರಾಜಭವನದ ಒಳಗೆ ನಡೆದನು.

ರಾಜನು ಹೋಗುವವರೆಗೂ ಮಂತ್ರಿಗಳು, ಕಾಬೂಯಿ ಹಾಗೂ ಉತ್ತುಂಗ ಎಲ್ಲರೂ ಎದ್ದು ನಿಂತಿದ್ದರು. ರಾಜನು ಹೋದ ನಂತರ ಒಬ್ಬ ಮಂತ್ರಿ ಕಾಬೂಯಿಯನ್ನು ನೋಡಿ, 'ನೀವು ಇಬ್ಬರೂ ನನ್ನ ಹಿಂದೆ ಬನ್ನಿ. ನಿಮಗೆ ಉಳಿದುಕೊಳ್ಳಲು ಬಿಡದಿಯ ವ್ಯವಸ್ಥೆ ಮಾಡುತ್ತೇನೆ'' ಎಂದು ಅವರನ್ನು ಕರೆದುಕೊಂಡು ಹೋಗಿ ಒಂದು ವಿಶಾಲವಾದ ಕೋಣೆಯನ್ನು ಅವರಿಗೆ ತೋರಿಸಿ "ಇಲ್ಲಿ ನಿಮ್ಮ ಎಲ್ಲ ಅವಶ್ಯಕತೆಗಳನ್ನು ಪೂರೈಸಲು ಸೇವಕರು ಇರುವರು. ನಾಳೆ ಬೆಳಿಗ್ಗೆ ರಾಜರಿಂದ ಕರೆ ಬರುವವರೆಗೂ ನೀವು ಇಲ್ಲಿ ವಿಶ್ರಾಂತಿ ಪಡೆಯಿರಿ'' ಎಂದು ಹೇಳಿ ಹೊರಟು ಹೋದನು.

ಮಂತ್ರಿ ಹೊರಟ ತುಸು ಸಮಯದ ನಂತರ ಒಬ್ಬ ಭಟನು ಅಲ್ಲಿಗೆ ಬಂದು "ತನಗಾಗಿ ಹೂಗಳನ್ನು ತಂದಿರುವ ಯುವಕನನ್ನು ಕರೆದುಕೊಂಡು ಬರುವಂತೆ ಯುವರಾಣಿ ಆಜ್ಞಾಪಿಸಿದ್ದಾರೆ'' ಎಂದನು.

ಉತ್ತುಂಗನು ಆಶ್ಚರ್ಯದಿಂದ ಕಾಬೂಯಿ ಕಡೆ ನೋಡಿದನು. ಕಾಬೂಯಿ "ನೀನು ಹೋಗಿ ಬಾ! ಆದರೆ ಅರಸರು ಹೇಳಿದ ವಿಷಯವನ್ನು ಮಾತ್ರ ಮರೆಯಬೇಡ. ಎಚ್ಚರ'' ಎಂದು ಎಚ್ಚರಿಸಿದನು.

(ಇನ್ನೂ ಇದೆ)





# ವಿಚಿತ್ರಪುಷ್ಪ

೬

[ಶತಾಬ್ಧಿಕ ಹೂವುಗಳೊಂದಿಗೆ ರಾಕ್ಷಸೀ ಮೃಗವನ್ನು ಹುಡುಕುತ್ತಾ ಹೊರಟ ಉತ್ತುಂಗನು, ಎದುರು ನೋಡದ ನಾಗಪುರಿ ಎಂಬ ನೂತನ ಪ್ರದೇಶಕ್ಕೆ ತಲುಪಿದನು. ಕಾಡಿನ ದೊರೆ ಕಾಬೂಯಿ ಉತ್ತುಂಗನನ್ನು ಆದರಿಸಿ, ರಾಜನ ಬಳಿ ಕರೆದುಕೊಂಡು ಹೋದನು. ಉತ್ತುಂಗನ ಸಾಹಸವನ್ನು ಮೆಚ್ಚಿದ ರಾಜನು ಅವನಿಗೆ ಸಹಾಯವಾಗಿ ಕೆಲವರು ಸೈನಿಕರನ್ನು ಕಳುಹಿಸುತ್ತೇನೆ ಎಂದು ಮಾತು ಕೊಟ್ಟನು. ಆ ದಿನ ಸಾಯಂಕಾಲ ಯುವರಾಣಿ ಮಲ್ಲಿಕಾ ಉತ್ತುಂಗನನ್ನು ಕರೆತರುವಂತೆ ಒಬ್ಬ ಭಟನನ್ನು ಕಳುಹಿಸಿದಳು... — ಆಮೇಲೆ]

ಉತ್ತುಂಗನನ್ನು ಕರೆದುಕೊಂಡು ಹೋದ ರಾಜಭಟನು ಅವನನ್ನು ರಾಜಭವನದಲ್ಲಿರುವ ಒಂದು ವಿಶಾಲವಾದ ಕೋಣೆಗೆ ಕರೆದುಕೊಂಡು ಹೋಗಿ "ಇಲ್ಲೇ ಇರು, ಯುವರಾಣಿ ಅವರಿಗೆ ಹೇಳಿ ಬರುತ್ತೇನೆ" ಎಂದು ಒಳಗೆ ಹೋದನು.

ಉತ್ತುಂಗನು ಅಲ್ಲೇ ನಿಂತಿರಲು, ಕಿಟಕಿಯ ಎದುರುಗಡೆ ಇರುವ ದ್ವಾರದಿಂದ ಒಳಗೆ ಬಂದ ಯುವರಾಣಿ ಮಲ್ಲಿಕಾ "ಆಗಲೇ ಬಂದೆಯಾ?" ಎಂದು ಮಾತನಾಡಿಸಿದಳು.

ಉತ್ತುಂಗನು ಅವಳತ್ತ ನೋಡಿದಾಗ "ನೀನು ಕೊಟ್ಟ ಅಂದವಾದ ಹೂವುಗಳನ್ನು ನಾನು ನನ್ನ ಕೋಣೆಯಲ್ಲಿ ಭದ್ರವಾಗಿ ಇರಿಸಿಕೊಂಡಿದ್ದೇನೆ. ಅದು ಸರಿ... ಆ ಶತಾಬ್ಧಿಕ ಹೂವುಗಳಿಗೆ ಶಾಪ ಹೇಗೆ ಬಂತು?" ಎಂದು ಕೇಳಿದಳು ಯುವರಾಣಿ.

ಆ ಪ್ರಶ್ನೆಯನ್ನು ಕೇಳಿ ಬೆಚ್ಚಿ ಬಿದ್ದ ಉತ್ತುಂಗನು, ಮರುಕ್ಷಣದಲ್ಲಿ ಸುಧಾರಿಸಿಕೊಂಡು "ಶಾಪವೇ? ಯಾರಿಗೆ? ಶತಾಬ್ಧಿಕ ಪುಷ್ಪಗಳಿಗೆ ಶಾಪವೇಕೆ ಯುವರಾಣೀ?" ಎಂದನು ಏನೂ ಅರಿಯದವನಂತೆ.



"ನಮ್ಮ ತಂದೆಯೊಂದಿಗೆ ನೀವು ಹೇಳಿದ ವಿಷಯವನ್ನು ಸ್ವಲ್ಪ ಕೇಳಿದೆ. ಇದ್ದಕ್ಕಿದ್ದಂತೆ ಭವನ ದಲ್ಲಿ ಸುವಾಸನೆ ತೇಲಿ ಬರಲು, ಕಾರಣ ಏನಾಗಿರ ಬಹುದೆಂದು ಅರಸುತ್ತಾ ಮಂತ್ರಿಗಳೊಂದಿಗೆ ಚರ್ಚಿಸು ತ್ತಿದ್ದ ನಮ್ಮ ತಂದೆಯ ಬಳಿ ಬಂದೆ. ತಂದೆಯವರ ಕೈಯಲ್ಲಿದ್ದ ಹೂಗಳಿಂದ ಆ ಸುವಾಸನೆ ಬರುತ್ತಿದೆ ಎಂದು ಗ್ರಹಿಸಿ, ಅತ್ತ ಕಡೆ ಬರುತ್ತಿರಲು, ಆ ಹೂ ಗಳಿಗಾಗಿ ರಾಕ್ಷಸೀ ಮೃಗ ಬರುವುದೆಂದು ಕಾಬೂಯಿ ಹೇಳುತ್ತಿರುವಾಗ ನಾನು ಅಲ್ಲಿಯೇ ಪರದೆಯ ಹಿಂದೆ ನಿಂತು, ನಿಮ್ಮ ಮಾತುಗಳನ್ನು ಕೇಳಿಸಿಕೊಂಡೆ. ಆದರೆ ರಾಕ್ಷಸೀ ಮೃಗಕ್ಕೂ ಸಹ ಆ ಹೂವುಗಳು ಇಷ್ಟವೆಂದು ನನಗೆ ತಿಳಿಯಲಿಲ್ಲ" ಎಂದಳು.

ಉತ್ತುಂಗನಿಗೆ ಏನು ಹೇಳಬೇಕೆಂದು ತಿಳಿಯದೆ "ಹೌದು, ನನಗೆ ಹೂವುಗಳೆಂದರೆ ತುಂಬಾ ಇಷ್ಟ. ಆದರೆ ನಾನು ರಾಕ್ಷಸೀ ಮೃಗ ಅಲ್ಲ" ಎಂದನು ನಗುತ್ತಾ.

"ನಿಜ ಹೇಳಿದೆ. ನೀನು ರಾಕ್ಷಸೀ ಮೃಗ ಅಲ್ಲ. ಆದರೆ ರಾಕ್ಷಸೀ ಮೃಗವನ್ನು ಹುಡುಕುತ್ತಾ ಹೊರಟಿರುವ ಸಾಹಸ ವೀರನು. ಅಲ್ಲವೇ?" ಎಂದು ಕೇಳಿದಳು ಯುವರಾಣಿ ಮೆಲ್ಲನೆ ನಗುತ್ತಾ.

"ಆ ಹೂಗಳನ್ನು ನಿಮಗಾಗಿಯೇ ತೆಗೆದುಕೊಂಡು ಬಂದೆ, ಯುವರಾಣೀ! ನನ್ನ ಮಾತಿನಲ್ಲಿ ನಂಬಿಕೆ ಇಡಿ" ಎಂದನು ಉತ್ತುಂಗನು.

"ನಂಬಬೇಕೆ ಎಂದೇ ಅನಿಸುತ್ತದೆ. ಆದರೆ?" ಎಂದು ಏನೋ ಹೇಳಲು ಪ್ರಯತ್ನಿಸಿ, ಸಂಶಯ ದಿಂದ ಉತ್ತುಂಗನನ್ನು ನೋಡಿದಳು ಯುವರಾಣಿ.

"ಯುವರಾಣೀ! ತಾವು ನನ್ನನ್ನು ಏಕೆ ಕರೆಯಿಸಿ ದಿರಿ ಎಂದು ತಾವು ಅಪ್ಪಣೆ ಮಾಡಲೇ ಇಲ್ಲ" ಎಂದನು ಉತ್ತುಂಗ.

"ನೀನು ರಾಕ್ಷಸೀ ಮೃಗವನ್ನು ಎದುರಿಸಲು ಹೊರಡುತ್ತಿರುವೆ. ಅದಕ್ಕಾಗಿ ನಾವು ರಾಕ್ಷಸೀ ಮೃಗದಂತಹ ಶತ್ರುವನ್ನು ಎದುರಿಸಲು ನಿನ್ನ ಸಹಾಯವನ್ನು ಕೇಳುತ್ತಿದ್ದೇವೆ" ಎಂದಳು ಯುವರಾಣಿ.

"ನಿಮಗೆ ಶತ್ರುಗಳೇ ಯುವರಾಣೀ! ನಾಗಪುರಿಗೆ ಶತ್ರುಗಳೇ ಇಲ್ಲವೆಂದು ಕಾಬೂಯಿ ಹೇಳಿದ ನಲ್ಲಾ?" ಎಂದನು ಉತ್ತುಂಗ ಆಶ್ಚರ್ಯದಿಂದ.

"ನಿಜ! ನಾಗಪುರಿಗೆ ಹೊರಗಡೆಯ ಶತ್ರುಗಳು ಇಲ್ಲ. ನಮ್ಮಲ್ಲೇ ಒಬ್ಬ ಶತ್ರುವು ಇದ್ದಾನೆ" ಎಂದಳು ಯುವರಾಣಿ.

"ಯಾರು?" ಎಂಬಂತೆ ನೋಡಿದ ಉತ್ತುಂಗ.

"ಮತ್ತೆ ಯಾರೂ ಅಲ್ಲ. ನಮ್ಮ ಸೋದರ ಮಾವ ನಾಗಸಿಂಹ. ನಮ್ಮ ತಂದೆ ಆತನಿಗೆ ಸೈನ್ಯ ದಲ್ಲಿ ದಳ ನಾಯಕನ ಪದವಿಯನ್ನು ಕೊಟ್ಟರು. ಆತ ಅದರಿಂದ ತೃಪ್ತಿ ಹೊಂದದೆ ಸೇನಾಧಿಪತಿ



ಪದವಿ ಬೇಕೆಂದು, ಒಡಹುಟ್ಟಿದವಳಾದ ನಮ್ಮ ತಾಯಿಯ ಮುಖಾಂತರ ತಂದೆಗೆ ಹೇಳಿಸಿದ. ನಮ್ಮ ತಂದೆ ಇದಕ್ಕೆ ಒಪ್ಪಲಿಲ್ಲ. ಇದರಿಂದ ಆಗ್ರಹಿಸಿದ ನಮ್ಮ ಮಾವ 'ನಾನು ಮನಸ್ಸು ಮಾಡಿದರೆ, ಈ ರಾಜ್ಯಕ್ಕೆ ಸೇನಾಧಿಪತಿ ಅಲ್ಲ ರಾಜನೇ ಆಗಬಲ್ಲೆ' ಎಂದು ತನ್ನ ಸಹಚರರೊಂದಿಗೆ ದೊಡ್ಡದಾಗಿ ಹೇಳಿಕೊಳ್ಳಲು ಆರಂಭಿಸಿದ. ಆ ವಿಷಯ ತಂದೆಗೆ ತಿಳಿದು ಬಂದಾಗ ಅವರು ಆತನನ್ನು ಕರೆಸಿ ಇನ್ನು ಮುಂದೆ ರಾಜಭವನದಲ್ಲಿ ಕಾಲಿಡಬೇಡವೆಂದು ಎಚ್ಚರಿಸಿ ಕಳುಹಿಸಿಬಿಟ್ಟರು. ನನ್ನನ್ನು, ನಮ್ಮ ತಾಯಿಯನ್ನು ಜಾಗ್ರತೆಯಾಗಿ ಇರುವಂತೆ ಸಲಹೆ ನೀಡಿದರು'' ಎಂದಳು ಯುವರಾಣಿ.

"ಈಗ ಸೇನಾಧಿಪತಿ ಯಾರು?'' ಎಂದು ಕೇಳಿದನು ಉತ್ತುಂಗನು.

"ದುರ್ಜಯನು. ಗಂಡು ಸಂತಾನವಿಲ್ಲದ ಕಾರಣ ನನ್ನನೇ ಈ ರಾಜ್ಯಕ್ಕೆ ರಾಣಿಯನ್ನಾಗಿ ಮಾಡಬೇಕೆಂದು ನನ್ನ ತಂದೆಯ ಅಭೀಷ್ಟ. ಪ್ರಜೆಗಳ ಕ್ಷೇಮವೇ ತನ್ನ ಕ್ಷೇಮವೆಂದು ಭಾವಿಸುವ ನಮ್ಮ ತಂದೆ, ನಾಗಸಿಂಹನಿಂದ ಪ್ರಜೆಗಳಿಗೆ ಯಾವ ವಿಧವಾದ ಹಾನಿ ಸಂಭವಿಸಬಾರದೆಂದು, ಹಗಲೂ ರಾತ್ರಿ ಆಲೋಚಿಸುತ್ತಿರುವರೆಂದು ನಮ್ಮ ತಾಯಿಯಿಂದ ತಿಳಿದುಕೊಂಡೆ'' ಎಂದಳು ಯುವರಾಣಿ.

"ಪ್ರಜೆಗಳ ಕ್ಷೇಮವನ್ನೇ ತನ್ನ ಕ್ಷೇಮವಾಗಿ ಭಾವಿಸುವ ಅರಸರಿಗೆ ಎಂಥಾ ಆಪತ್ತೂ ಬರುವುದಿಲ್ಲ. ಸೈನಿಕರಿಗಿಂತಲೂ ಪ್ರಜೆಗಳೇ ರಾಜರನ್ನು ರಕ್ಷಿಸಬಲ್ಲರು. ಸರಿ! ಈಗ ನಾಗಸಿಂಹನು ಎಲ್ಲಿರುವನು?'' ಎಂದು ಕೇಳಿದನು ಉತ್ತುಂಗ.

"ನಮ್ಮ ತಂದೆಯ ಸಲಹೆಯ ಪ್ರಕಾರ ಸೇನಾಧಿಪತಿ ಆತನನ್ನು ಕೆಲವರು ಸೈನಿಕರೊಂದಿಗೆ ಉತ್ತರದ ಸರಹದ್ದಿನ ಕಾವಲಿಗೆ ಕಳುಹಿಸಿದ್ದಾನೆ. ಪ್ರತಿದಿನಾ ಆತನ ಬಗ್ಗೆ ಸುದ್ದಿ ರಾಜರಿಗೆ ತಿಳಿಯುತ್ತಲೇ ಇರುತ್ತದೆ. ಆದರೂ ಆತ ತುಂಬ ಸಮಯ ಸುಮ್ಮನಿರಲಾರನೆಂದು, ಸಿಂಹಾಸನಕ್ಕಾಗಿ ಕುತಂತ್ರ ಮಾಡುವನೆಂದು ನಮ್ಮ ತಾಯಿ ಹೆದರುತ್ತಿದ್ದಾರೆ. ಈ ವಿಷಯ ನಿನಗೆ ಹೇಳಬೇಕೆಂದೇ ನಿನ್ನನ್ನು ಬರಮಾಡಿದೆ. ನೀನು ಸ್ವಲ್ಪ ದಿನ ಇಲ್ಲೇ ಇದ್ದರೆ ಒಳ್ಳೆಯದು'' ಎಂದಳು ಯುವರಾಣಿ.

"ಆಗಲಿ ಯುವರಾಣೀ! ಆದರೆ ನಾನು ಒಂದು ಮುಖ್ಯವಾದ ಕಾರ್ಯದ ನಿಮಿತ್ತ ದೂರ ಪ್ರಾಂತ್ಯಕ್ಕೆ ಹೋಗುತ್ತಿದ್ದೇನೆ. ಈ ವಿಷಯದಲ್ಲಿ ರಾಜರು ಸಹಾ ನನಗೆ ಸಹಾಯ ಮಾಡುವುದಾಗಿ ಮಾತು ಕೊಟ್ಟಿರುವರು'' ಎಂದ ಉತ್ತುಂಗ.

"ಆ ವಿಷಯ ನನಗೂ ಗೊತ್ತು. ನಾಗಸಿಂಹನ ಬಗ್ಗೆ ನಾನು ನಿನಗೆ ಹೇಳಿದ ವಿಷಯ ಯಾರಿಗೂ

ತಿಳಿಯಬಾರದು. ಬೇರೆ ಸುದ್ದಿ ನನಗೆ ತಿಳಿದು ಬಂದರೆ ನಿನಗೆ ತಿಳಿಯಪಡಿಸುತ್ತೇನೆ. ಇನ್ನು ನೀನು ಹೋಗಬಹುದು'' ಎಂದಳು ಯುವರಾಣಿ.

ಉತ್ತುಂಗನು ಭಟನ ಹಿಂದೆ ಬಿಡದಿ ಮನೆ ಸೇರಿದಾಗ, ಅಲ್ಲಿ ಕಾಬೂಯಿ ಅವನಿಗಾಗಿ ಎದುರು ನೋಡುತ್ತಿದ್ದನು. ಆತನು ಕೇಳುವುದಕ್ಕೆ ಮುಂಚೆಯೇ "ಯುವರಾಣಿ ಶತಾಬ್ದಿಕ ಹೂಗಳ ಬಗ್ಗೆ ವಿವರಗಳನ್ನು ಕೇಳಿದಳು. ನಾವು ರಾಜರೊಂದಿಗೆ ಹೇಳಿದ ಕೆಲವು ವಿಷಯಗಳನ್ನು ಅವಳು ಕೇಳಿಸಿಕೊಂಡಂತೆ ಇದೆ. ನೂರು ವರ್ಷಗಳಿಗೆ ಒಮ್ಮೆ ಅರಳುವ ಹೂಗಳು ಅದು ಎಂದು ಮಾತ್ರ ಹೇಳಿದೆ. ಅದಕ್ಕೆ ಮೇಲೆ ನಾನು ಏನನ್ನೂ ಹೇಳಲಿಲ್ಲ'' ಎಂದು ಹೇಳಿದ ಉತ್ತುಂಗನು ಸರ್ವಸಾಧಾರಣವಾಗಿ.

"ಒಳ್ಳೆಯ ಕೆಲಸ ಮಾಡಿದೆ'' ಎಂದನು ಕಾಬೂಯಿ ಮೆಚ್ಚುಗೆಯಿಂದ.

ಮರುದಿನ ಬೆಳಿಗ್ಗೆ ರಾಜರ ಕಡೆಯಿಂದ ಭಟನು ಕರೆಯಲು ಬಂದಾಗ, ಕಾಬೂಯಿ ಉತ್ತುಂಗರು ಸಿದ್ಧರಾಗಿ ರಾಜದರ್ಶನಕ್ಕೆ ಹೊರಟರು. ಅವರನ್ನು ನೋಡುತ್ತಲೇ ರಾಜನು "ನಿನ್ನೆಯ ದಿನ ನಾವು ಮಾತಾಡಿಕೊಂಡಂತೆ, ಉತ್ತುಂಗನ ಜೊತೆಗೆ ದಳ ನಾಯಕ ನಾಗಸಿಂಹನನ್ನು, ಅವನೊಂದಿಗೆ ಕೆಲವು ಸೈನಿಕರನ್ನು ಕಳುಹಿಸುತ್ತೇನೆ. ನಾಗಸಿಂಹನು ನಮ್ಮ ರಾಜ್ಯದ ಉತ್ತರ ದಿಕ್ಕಿನ ಸರಹದ್ದಿನಲ್ಲಿ ಇರುವನು. ಅವನು ಬರಲು ಎರಡು ಮೂರು ದಿನಗಳು ಆಗ ಬಹುದು. ಅದುವರೆಗೂ ಉತ್ತುಂಗನು ಇಲ್ಲೇ ಇರಲಿ. ನೀನು ಬೇಕಾದರೆ ಮರಳಿ ಹೋಗಬಹುದು'' ಎಂದನು ಕಾಬೂಯಿಯನ್ನು ನೋಡಿ.

ಕಾಬೂಯಿ ರಾಜರಿಗೆ ನಮಸ್ಕರಿಸಿ ಅಪ್ಪಣೆ ಪಡೆದು ಉತ್ತುಂಗನನ್ನು ಅವನ ಬಿಡದಿಯಲ್ಲಿ ಬಿಟ್ಟು ತನ್ನ ಸ್ವಸ್ಥಳಕ್ಕೆ ಹಿಂತಿರುಗಿದನು.



ಉತ್ತುಂಗನು ಭೋಜನವನ್ನು ಮುಗಿಸಿ, ನಗರ ದಲ್ಲಿರುವ ವಿಶೇಷಗಳನ್ನು ವಿಚಿತ್ರಗಳನ್ನು ನೋಡಲು ಹೊರಟನು. ಹೇಳಿ ಮಾಡಿಸಿದ ಹಾಗಿದ್ದ ನಗರ ಬೀದಿಗಳು, ವಿಚಿತ್ರವಾದ ಭವನಗಳು ಎಲ್ಲವನ್ನೂ ನೋಡಿ ಅವನಿಗೆ ಆಶ್ಚರ್ಯವಾಯಿತು. ಈ ರಾಜ್ಯವು ಬಹಳ ಸುಭಿಕ್ಷವಾಗಿ ಸುಖಶಾಂತಿಗಳಿಂದ ತುಂಬಿ ದಂತೆ ಇದೆ ಎಂದು ಉತ್ತುಂಗನಿಗೆ ಅನಿಸಿತು. ನಾಗಸಿಂಹನ ಕುಟಿಲತನದಿಂದ ರಾಜರಿಗೆ ಅಪಾಯ ಸಂಭವಿಸಿದರೆ ಈ ರಾಜ್ಯದ ಪ್ರಜೆಗಳ ಗತಿ ಏನಾ ಗುವುದೋ ಎಂದು ಆಲೋಚಿಸುತ್ತಾ ಉತ್ತುಂಗನು ಸಂಧ್ಯಾಸಮಯಕ್ಕೆ ತನ್ನ ಬಿಡದಿಗೆ ಬಂದು ಸೇರಿದನು. ಹಾಗೆಯೇ ಎರಡು ದಿನಗಳು ಕಳೆಯಿತು. ಮೂರ ನೆಯ ದಿನ ಸಾಯಂಕಾಲ ಒಬ್ಬ ಭಟನು ಬಂದು ಯುವರಾಣಿ ಅವನನ್ನು ಕರೆದುಕೊಂಡು ಬರುವಂತೆ ಅಪ್ಪಣೆ ಮಾಡಿರುವುದಾಗಿ ತಿಳಿಸಿದನು. ಉತ್ತುಂಗನು



ಅವನ ಹಿಂದೆ ರಾಜಭವನಕ್ಕೆ ಹೊರಟನು. ಅಲ್ಲಿ ಅವನ ಬರುವಿಕೆಗಾಗಿ ಎದುರು ನೋಡುತ್ತಿದ್ದ ಯುವರಾಣಿ "ನಮ್ಮ ಮಾವ ದಳನಾಯಕ ನಾಗ ಸಿಂಹನು ರಾಜಧಾನಿಗೆ ಬರುತ್ತಿದ್ದಾನೆ. ನೀನು ಆತ ನೊಂದಿಗೆ ಎಚ್ಚರಿಕೆಯಿಂದ ವ್ಯವಹರಿಸಬೇಕು. ಅಷ್ಟೇ ಅಲ್ಲ, ಆತನು ನಾಗಪುರಿಯ ಸಿಂಹಾಸನವನ್ನು ಕಬಳಿಸಲು ಏನಾದರೂ ಕುತಂತ್ರದ ಬಲೆ ಹೆಣೆಯು ತ್ತಿರುವನೇ ಎಂದು ತಿಳಿದುಕೊಳ್ಳಲು ಪ್ರಯತ್ನಿಸು. ನೀನು ಅರಸರ ವಿಶ್ವಾಸಪಾತ್ರನೆಂದು ತಿಳಿದರೆ ಆತ ತನ್ನ ರಹಸ್ಯಗಳನ್ನು ಬಯಲು ಮಾಡುವುದಿಲ್ಲ. ಸರಿ! ನಿನ್ನ ಪ್ರಯಾಣ ವಿಜಯಪ್ರದವಾಗಿ ಮುಗಿದ ನಂತರ ಮರಳಿ ಇಲ್ಲಿಗೆ ಬರುವೆಯಾ? ಅಥವಾ... ಹಾಗೆಯೇ ಮಾಣಿಕ್ಯಪುರಿಗೆ ಹೋಗುವೆಯಾ?'' ಎಂದು ಕೇಳಿದಳು.

"ಖಂಡಿತ ಇಲ್ಲಿಗೆ ಬರುತ್ತೇನೆ. ಇಲ್ಲಿಯ ಪರಿಸ್ಥಿತಿಗಳನ್ನು ಸರಿ ಮಾಡಿ ಮತ್ತೆ ಹೋಗುತ್ತೇನೆ ಯುವರಾಣೀ!'' ಎಂದನು ಉತ್ತುಂಗ.

"ನೀನು ಚಾಕಚಕ್ಯತೆಯಿಂದ ಮಾತಾಡಿ ನಾಗ ಸಿಂಹನ ಯೋಚನೆಗಳನ್ನು ತಿಳಿದುಕೊಂಡರೆ ಅವನ್ನು ನಾಶ ಮಾಡಲು ಸುಲಭವಾಗುವುದು. ಈ ವಿಷಯ ವನ್ನು ಹೇಳಬೇಕೆಂದೇ ನಿನಗೆ ಕರೆ ಕಳುಹಿಸಿದೆ. ಇನ್ನು ಹೋಗಬಹುದು'' ಎಂದು ಒಳಗೆ ಹೊರಟು ಹೋದಳು ಯುವರಾಣಿ.

ಉತ್ತುಂಗನು ತನ್ನ ಬಿಡದಿಗೆ ತಿರುಗಿ ಹೋದನು.

ಆ ದಿನವೇ ರಾಜ್ಯದ ಉತ್ತರ ಸರಹದ್ದಿನಿಂದ ಬಂದ ದಳನಾಯಕನಾದ ನಾಗಸಿಂಹನು, ಸೇನಾಧಿ ಪತಿ ದುರ್ಜಯನ ಬಳಿ ಹೋಗಿ ನಮಸ್ಕರಿಸಿ "ಇದ್ದಕ್ಕಿದ್ದಂತೆ ನನ್ನನ್ನು ಬರ ಮಾಡಿದ ಕಾರಣ ಏನು?'' ಎಂದು ಕೇಳಿದನು.

"ಮಾಣಿಕ್ಯಪುರಿಯಿಂದ ಕೆಲವು ಹೂವು ಗಳೊಂದಿಗೆ ಹೊರಟು ಇತ್ತ ಕಡೆ ಬಂದ ಉತ್ತುಂಗ ನೆಂಬ ಯುವಕನ ಸಹಾಯಕ್ಕಾಗಿ ನಿನ್ನನ್ನು, ಮತ್ತೆ ಕೆಲವು ಸೈನಿಕರನ್ನು ಕಳುಹಿಸಬೇಕೆಂದು ರಾಜರು ನಿರ್ಧಾರ ಮಾಡಿದ್ದಾರೆ'' ಎಂದನು ಸೇನಾಧಿಪತಿ.

"ಅವನು ಅಸಹಾಯ ಶೂರನಲ್ಲವೇ? ಇಷ್ಟು ದೂರ ಏಕಾಂಗಿಯಾಗಿ ಬಂದ ಆ ವೀರನಿಗೆ, ಇನ್ನು ಮುಂದೆ ಹೋಗಲು ಸಹಾಯ ಬೇಕಾಗಿತ್ತೇ?'' ಎಂದ ನಾಗಸಿಂಹನು ವ್ಯಂಗ್ಯವಾಗಿ.

"ನಿಜ ಹೇಳಬೇಕಾದರೆ ಅವನು ಒಬ್ಬನೇ ಹೋಗಲು ನಿಶ್ಚಯ ಮಾಡಿಕೊಂಡಿದ್ದ. ನಮ್ಮ ಸಹಾಯವನ್ನು ಬೇಡಿ ಬರಲಿಲ್ಲ. ಆದರೆ ಆತನು ಹುಡುಕುತ್ತಾ ಹೊರಟಿರುವುದು ಒಂದು ರಾಕ್ಷಸೀ ಮೃಗವನ್ನು. ಆ ರಾಕ್ಷಸೀಮೃಗ ಶತಾಬ್ದಿಕ ಪುಷ್ಪ ಗಳಿಗಾಗಿ ಮಾಣಿಕ್ಯಪುರಿಯಲ್ಲಿ ಪ್ರವೇಶಿಸಿ ನಾನಾ ಭೀಭತ್ಸಗಳನ್ನು ಉಂಟು ಮಾಡುತ್ತಿದೆಯಂತೆ.

ಅದರಿಂದ ಅದನ್ನು ಅತ್ತ ಕಡೆ ಬರದಂತೆ ಮಾಡಲು, ಅದರ ವಾಸ ಸ್ಥಳವನ್ನು ಅರಸುತ್ತಾ ಶತಾಬ್ಧಿಕ ಪುಷ್ಪಗಳೊಂದಿಗೆ ಭಿಲ್ಲ ಯುವಕನಾದ ಉತ್ತುಂಗನು ಹೊರಟಿರುವನು. ಪ್ರಜೆಗಳ ಕ್ಷೇಮಕ್ಕಾಗಿ ಒಂಟಿಯಾಗಿ ಆ ರಾಕ್ಷಸೀ ಮೃಗವನ್ನು ಎದುರಿಸಲು ಹೊರಟಿರುವ ಅವನ ಧೈರ್ಯ ಸಾಹಸಗಳನ್ನು ಕಂಡು ಆನಂದ ಭರಿತರಾದ ನಮ್ಮ ಅರಸರು ನಮ್ಮ ಸೈನಿಕರನ್ನು ಕಳುಹಿಸಲು ತೀರ್ಮಾನ ಮಾಡಿದ್ದಾರೆ'' ಎಂದನು ಸೇನಾಧಿಪತಿ.

ನಾಗಸಿಂಹನು ತುಸು ಸಮಯ ಮೌನವಾಗಿ ಆಲೋಚಿಸಿ "ರಾಕ್ಷಸೀಮೃಗವನ್ನು ಹುಡುಕುತ್ತಾ ಕೇವಲ ಒಬ್ಬ ಭಿಲ್ಲ ಯುವಕನು ಒಬ್ಬಂಟಿಗನಾಗಿ ಹೊರಟಿರುವನೆಂದರೆ ನೀವು ಹೇಗೆ ನಂಬಿದಿರಿ ಸೇನಾಧಿಪತಿ?'' ಎಂದು ಕೇಳಿದನು.

"ಮಾಣಿಕ್ಯಪುರಿಯಿಂದ ಒಬ್ಬಂಟಿಗನಾಗಿ ಬಂದಿರುವ ಆ ಯುವಕನ ಮಾತುಗಳನ್ನು ನಂಬದೇ ಇರಲು ಸಾಧ್ಯವಿಲ್ಲ. ಮೇಲಾಗಿ ಇದು ರಾಜಾಜ್ಞೆ! ಅದನ್ನು ಪಾಲಿಸುವುದೇ ನಮ್ಮ ಕರ್ತವ್ಯ'' ಎಂದನು ಸೇನಾಧಿಪತಿ.

"ಅಪ್ಪಣೆ! ಸೇನಾಧಿಪತಿ! ತಮ್ಮ ಆಜ್ಞೆಯನ್ನು ಶಿರಸಾ ವಹಿಸುತ್ತೇನೆ. ಆ ಯುವಕನನ್ನು ನಾನು ಯಾವಾಗ ನೋಡಬೇಕೆಂದು ಹೇಳುವಿರಿ?'' ಎಂದು ಕೇಳಿದನು ನಾಗಸಿಂಹ.

"ನಾಳೆ, ಇಲ್ಲೇ ಇದೇ ಸಮಯಕ್ಕೆ ನೋಡ ಬಹುದು. ಇನ್ನು ನೀನು ಹೊರಡು'' ಎಂದನು ಸೇನಾಧಿಪತಿ.

ನಾಗಸಿಂಹನು ಅಲ್ಲಿಂದ ವೇಗವಾಗಿ ಹೊರಟು ಹೋದನು.

ಮರುದಿನ ಬೆಳಕು ಮೂಡುತ್ತಲೇ, ರಾಜರು ಬರ ಹೇಳುತ್ತಿರುವರೆಂದು ಒಬ್ಬ ಭಟನು ಬಂದು ಸೇನಾಧಿಪತಿಗೆ ತಿಳಿಸಿದನು. ಸೇನಾಧಿಪತಿ ತತ್‌ಕ್ಷಣವೇ ರಾಜಭವನಕ್ಕೆ ಬಂದನು. ರಾಜನು ಗಂಭೀರವಾಗಿ ಇದ್ದನು. ಯುವರಾಣಿ ಮಲ್ಲಿಕಳ ಕಣ್ಣಿನಿಂದ ಕಣ್ಣೀರು ಜಾರಿ ಬೀಳುತ್ತಿತ್ತು.



"ಏನು ನಡೆಯಿತು ಮಹಾರಾಜಾ!'' ಎಂದು ಕೇಳಿದನು ಸೇನಾಧಿಪತಿ ಆತುರದಿಂದ.

"ಶತಾಬ್ಧಿಕ ಪುಷ್ಪಗಳು ಮಾಯವಾಗಿವೆ. ಯುವರಾಣಿಯ ಭವನದಲ್ಲಿ ಅವುಗಳನ್ನು ಭದ್ರ ಪಡಿಸಿದ ಹೂ ಕುಂಡಗಳು ಹಾಗೇ ಇವೆ. ಆದರೆ ಹೂಗಳು ಮಾತ್ರ ಕಾಣಲಿಲ್ಲ. ಯುವರಾಣಿಯ ಅಂತಃಪುರದಲ್ಲಿ ಪ್ರವೇಶಿಸಿ ಇಂಥಾ ಕಾರ್ಯ ಮಾಡಿದವರು ಯಾರಾಗಿರಬಹುದು? ಆ ಹೂಗಳ ಸುವಾಸನೆ ಎಲ್ಲ ಪರಿಚಾರಿಕೆಯರನ್ನೂ ಖಂಡಿತ ಆಕರ್ಷಿಸಿರುತ್ತದೆ. ಆದರೆ ಯಾರೊಬ್ಬರೂ ಸಹಾ ಅವು ಹೇಗೆ ಮಾಯವಾಯಿತೆಂದು ಹೇಳುತ್ತಿಲ್ಲ.

ಆ ಹೂವುಗಳು ಕಾಣದೆ ಹೋದ ವಿಷಯ ಯುವರಾಣಿ ಸ್ವತಃ ನೋಡಿ ತಿಳಿದುಕೊಂಡಳೇ ವಿನಃ ಯಾರೂ ಆಕೆಯ ಬಳಿ ಆ ವಿಷಯವನ್ನು ಮುಂಚಿತವಾಗಿ ತಿಳಿಸಲಿಲ್ಲ. ಕಳ್ಳತನವನ್ನು ಅತ್ಯಂತ ಚಾಕಚಕ್ಯತೆಯಿಂದ ನಡೆಸಿದ್ದಾರೆ. ಈ ಕೆಲಸವನ್ನು ಯಾರು ಮಾಡಿರಬಹುದೆಂದು ಊಹೆಗೂ ನಿಲುಕದಾಗಿದೆ ಸೇನಾಧಿಪತಿ'' ಎಂದನು ಅರಸ.

"ರಾಜಭವನದ ಬಗ್ಗೆ ಚೆನ್ನಾಗಿ ಅರಿತಿರುವವರೇ ಈ ಹೀನ ಕಾರ್ಯವನ್ನು ಮಾಡಿರಬೇಕು. ಏಕೆಂದರೆ, ರಾಜಭವನದ ಒಳಗೆ ರಾಕ್ಷಸೀ ಮೃಗ ಬರಲು ಸಾಧ್ಯವಿಲ್ಲ ಅಲ್ಲವೇ?'' ಎಂದನು ಸೇನಾಧಿಪತಿ.

"ರಾಕ್ಷಸೀ ಮೃಗವೇ? ರಾಜಭವನದ ಒಳಗೆ ರಾಕ್ಷಸೀಮೃಗವೇ? ನೀವು ಏನು ಹೇಳುತ್ತಿರುವಿರಿ ಸೇನಾಧಿಪತೀ, ನನಗೆ ಅರ್ಥವಾಗುತ್ತಿಲ್ಲ'' ಎಂದಳು ಯುವರಾಣಿ ಆಶ್ಚರ್ಯದಿಂದ.

ಅಷ್ಟರಲ್ಲಿ ಅರಸನು ಮಾತು ಬೆಳೆಯದಂತೆ "ಅದೇನೂ ಇಲ್ಲ ಮಗೂ! ಆ ವಿಷಯಗಳನ್ನು ನಿನಗೆ ನಂತರ ಹೇಳುತ್ತೇನೆ'' ಎಂದು ಹೇಳಿ ಸೇನಾಧಿಪತಿಯನ್ನು ನೋಡಿ "ಈಗ ಆ ಹೂಗಳನ್ನು ನಮ್ಮ ವಶಕ್ಕೆ ತೆಗೆದುಕೊಳ್ಳಲು ಏನು ಮಾಡಬೇಕೆಂದು ಆಲೋಚಿಸಬೇಕು'' ಎಂದನು.

"ಅಪ್ಪಣೆ ಪ್ರಭೂ! ಆ ಕೆಲಸಕ್ಕೆ ಈಗಲೇ ನಮ್ಮ ಭಟರನ್ನು ಕಳುಹಿಸುತ್ತೇನೆ. ಅವು ಎಲ್ಲಿದ್ದರೂ ಸುವಾಸನೆಯನ್ನು ಹೊರ ಸೂಸುತ್ತವಲ್ಲವೇ? ಅದರಿಂದ ಸುಲಭವಾಗಿ ಕಂಡು ಹಿಡಿಯಬಹುದು. ನಿನ್ನೆಯಿಂದ ರಾಜಭವನದ ಒಳಗೆ ಯಾರ್‍ಯಾರು ಬಂದು ಹೋದರೆಂಬ ವಿಷಯವನ್ನು ಕಾವಲು ಭಟರನ್ನು ಕೇಳಿ ತಿಳಿದುಕೊಳ್ಳುತ್ತೇನೆ'' ಎಂದು ಸ್ವಲ್ಪ ಸಮಯ ಸುಮ್ಮನಿದ್ದು "ಮತ್ತೊಂದು ವಿಷಯ ಮಹಾರಾಜಾ! ನಿನ್ನೆ ದಳನಾಯಕ ನಾಗಸಿಂಹನು ಬಂದಿರುವನು. ಸೈನಿಕರೊಂದಿಗೆ ಉತ್ತುಂಗನಿಗೆ ಸಹಾಯವಾಗಿ ಹೋಗಲು ಸಮ್ಮತಿಸಿರುವನು'' ಎಂದನು ಸೇನಾಧಿಪತಿ.

'ನಾಗಸಿಂಹನು ಬಂದಿರುವನೇ? ನಿನ್ನೆಯಿಂದ ರಾಜಧಾನಿಯಲ್ಲಿ ಇರುವನೇ? ಶಭಾಷ್! ಅದಕ್ಕೇ ಚಿತ್ರವಿಚಿತ್ರವಾದ ಸಂಘಟನೆಗಳು ನಡೆಯುತ್ತಿವೆ.'' ಎಂದು ತುಸು ಸಮಯ ಮೌನವಾಗಿ ಆಲೋಚಿಸಿ "ಆ ಹೂಗಳು ಎಲ್ಲಿದೆಯೋ ಹುಡುಕಿ ತರುವುದು ನಿಮ್ಮ ಪ್ರಥಮ ಕೆಲಸ. ಆಮೇಲೆ ಉತ್ತುಂಗನ ಪ್ರಯಾಣದ ಬಗ್ಗೆ ನಿರ್ಣಯ ಮಾಡೋಣ'' ಎಂದನು ರಾಜ.

(ಇನ್ನೂ ಇದೆ)





# ವಿಚಿತ್ರ ಪುಷ್ಪ

## ೧೦

[ಉತ್ತುಂಗನ ಸಾಹಸವನ್ನು ಮೆಚ್ಚಿದ ನಾಗಪುರಿಯ ರಾಜನು ಅವನಿಗೆ ಜೊತೆಯಾಗಿ ಕೆಲವು ಭಟರನ್ನು ಕಳುಹಿಸುತ್ತೇನೆಂದು ಮಾತು ಕೊಟ್ಟನು. ನಾಗಪುರಿ ರಾಜಕುಮಾರಿ ಮಲ್ಲಿಕ ಉತ್ತುಂಗನನ್ನು ಕರೆಸಿ, ನಾಗಪುರಿಯ ಸಿಂಹಾಸನಕ್ಕಾಗಿ ನಾಗಸಿಂಹನು ಸಂಚು ಮಾಡುತ್ತಿರುವನೆಂದು ಹೇಳಿ, ಸಂಚನ್ನು ಮುರಿಯಲು ಉತ್ತುಂಗನ ಸಹಾಯವನ್ನು ಬೇಡಿದಳು. ಯುವರಾಣಿಯ ಭವನದಲ್ಲಿರುವ ಶತಾಬ್ಧಿಕ ಪುಷ್ಪಗಳು ಕಾಣಿಸದಾಗ, ವಿಸ್ಮಯ ಹೊಂದಿದ ರಾಜನು ಅವುಗಳನ್ನು ಹುಡುಕುವಂತೆ ಸೇನಾಧಿಪತಿಗೆ ಹೇಳಿದನು.]

ರಾಜಭವನದಿಂದ ಹೊರಗೆ ಬರುತ್ತಲೇ ಸೇನಾಧಿಪತಿ ಉತ್ತುಂಗನಿಗೆ ಹೇಳಿ ಕಳುಹಿಸಿದನು. ಶತಾಬ್ಧಿಕ ಪುಷ್ಪಗಳನ್ನು ಹುಡುಕುವ ಭಾದ್ಯತೆಯನ್ನು ದಳ ನಾಯಕನಾದ ನಾಗಸಿಂಹನಿಗೆ ಒಪ್ಪಿಸಬೇಕೆಂಬ ಯೋಚನೆ ಆತನಿಗೆ ಬಂದಿತು. ಆದರೆ ದಳನಾಯಕನು ರಾಜಧಾನಿಯಲ್ಲಿ ಉಳಿಯುವುದು ರಾಜನಿಗೆ ಇಷ್ಟ ವಿಲ್ಲದ ಕಾರಣ, ಆ ಕೆಲಸವನ್ನು ಆತನಿಗೆ ಒಪ್ಪಿಸು ವುದು ಖಂಡಿತಾ ಸರಿಯಲ್ಲವೆಂದು ನಿಶ್ಚಯ ಮಾಡಿಕೊಂಡನು.

ಶತಾಬ್ಧಿಕ ಪುಷ್ಪಗಳನ್ನು ಕುರಿತು ಯೋಚಿಸುತ್ತಾ ಸೇನಾಧಿಪತಿ ತನ್ನ ಭವನಕ್ಕೆ ಸೇರಿದ ಸ್ವಲ್ಪ ಸಮಯಕ್ಕೆ ಉತ್ತುಂಗನು ಅಲ್ಲಿಗೆ ಬಂದು ಆತನಿಗೆ ನಮಸ್ಕರಿಸಿ "ನಾವು ಯಾವಾಗ ಹೊರಡಬೇಕು? ನನ್ನ ದೋಣಿ ಸಮುದ್ರ ತೀರದಲ್ಲಿಯೇ ಇದೆ. ಮಿಕ್ಕ ದೋಣಿಗಳು ಸಿದ್ಧವಾಗಿದೆಯೇ? ನಾನು ಇಲ್ಲಿಗೆ ತಂದ ಹೂವುಗಳನ್ನು ಬಿಟ್ಟು ಮಿಕ್ಕ ಹೂವುಗಳು ಕಾಬೂಯಿಯ ಮನೆಯಲ್ಲೇ ಇವೆ. ನಾವು ಯಾವಾಗ ಹೊರಡುತ್ತೇವೆ ಎಂದು ತಿಳಿದರೆ



ಆ ಹೂಗಳನ್ನು ಸಹಾ ತೆಗೆದುಕೊಂಡು ಬರಬಹುದು'' ಎಂದನು ಉತ್ಸಾಹದಿಂದ.

"ದೋಣಿಗಳು ಸಿದ್ಧವಾಗುತ್ತಿವೆ. ಇಷ್ಟರೊಳಗೆ ನಿನ್ನೊಂದಿಗೆ ಕಳುಹಿಸಬೇಕಾದ ಭಟರನ್ನು ಆಯ್ಕೆ ಮಾಡುತ್ತಿದ್ದೇವೆ. ನಿನಗೆ ಜೊತೆಯಾಗಿರಲು ದಳನಾಯಕ ನಾಗಸಿಂಹನನ್ನು ಕೂಡಾ ಕರೆಸಿದ್ದೇವೆ. ಯಾವಾಗ ಹೊರಡಬೇಕು? ಹೇಗೆ. ಮುಂತಾದ ವಿಷಯಗಳನ್ನು ಕುರಿತು ನಿನ್ನೊಂದಿಗೆ ಚರ್ಚಿಸಲು ನಾಗಸಿಂಹನು ಬರುತ್ತಿದ್ದಾನೆ'' ಎಂದು ಹೇಳಿದನು ಸೇನಾಧಿಪತಿ.

"ಯಾವಾಗ ಬರುವನು?'' ಎಂದು ಕೇಳಿದನು ಉತ್ತುಂಗ.

"ಇಷ್ಟು ಹೊತ್ತಿಗೆ ಬರಬೇಕಾಗಿತ್ತು. ಮತ್ತೆ ಏಕೆ ಬರಲಿಲ್ಲವೋ? ಕಾರಣ ತಿಳಿಯದು'' ಎಂದು ಸೇನಾಧಿಪತಿ ಹೇಳುತ್ತಿರುವಾಗ ದಳನಾಯಕ ನಾಗಸಿಂಹನು ಅಲ್ಲಿಗೆ ಬಂದನು.

"ನಾಗಸಿಂಹಾ! ಇವನೇ ನಾನು ಹೇಳಿದ ಯುವಕ ಉತ್ತುಂಗ. ನೀನು ಅವನೊಂದಿಗೆ ಬರುತ್ತಿರುವ ಸುದ್ದಿ ಕೇಳಿ ಬಹಳ ಉತ್ಸಾಹದಿಂದ ಇರುವನು. ಈ ಯುವಕನನ್ನು ನಿನ್ನ ಶಿಬಿರಕ್ಕೆ ಕರೆದುಕೊಂಡು ಹೋಗಿ ಪ್ರಯಾಣದ ಬಗ್ಗೆ ವಿವರಗಳನ್ನು ತಿಳಿ. ಯಾವಾಗ ಹೇಗೆ ಹೊರಡಬೇಕು? ಎಂಥಾ ಮುನ್ನೆಚ್ಚರಿಕೆ ತೆಗೆದುಕೊಳ್ಳಬೇಕು? ಮೊದಲಾದ ವಿಷಯಗಳನ್ನು ಇಬ್ಬರೂ ಚರ್ಚಿಸಿ ನಿರ್ಣಯ ಮಾಡಿ. ಈ ಯುವಕನ ಪ್ರಯಾಣ ವಿಜಯಪ್ರದವಾಗಿ ಆಗಬೇಕೆಂದು ಮಹಾರಾಜರ ಆಸೆ. ಅದನ್ನು ಮರೆಯಬೇಡ. ಇಬ್ಬರೂ ಮಾತನಾಡಿಕೊಂಡು ಯಾವಾಗ ಹೊರಡುತ್ತೀರಿ ಎಂದು ತಿಳಿಸಿ'' ಎಂದನು ಸೇನಾಧಿಪತಿ.

ನಾಗಸಿಂಹನು ಮೆಲ್ಲನೆ ನಕ್ಕು "ಅಪ್ಪಣೆ ಸೇನಾಧಿಪತಿ! ನಮ್ಮ ಸಮುದ್ರ ಪ್ರಯಾಣದ ಬಗ್ಗೆ ಯೋಚನೆಯನ್ನು ಸಿದ್ಧ ಮಾಡಿಕೊಂಡು ನಿಮ್ಮ ಬಳಿ ಬರುತ್ತೇವೆ'' ಎಂದು ಹೇಳಿ, ಉತ್ತುಂಗನತ್ತ ತಿರುಗಿ "ಹೊರಡೋಣವೇ?'' ಎಂದು ಹೇಳುತ್ತಾ ಹಿಂತಿರುಗಿ ಗಂಭೀರವಾಗಿ ಹೊರಗೆ ನಡೆಯಲು ಆರಂಭಿಸಿದನು.

ಉತ್ತುಂಗನು ಅವನನ್ನು ಅನುಸರಿಸಿದನು. ಇಬ್ಬರೂ ಸಮೀಪದಲ್ಲಿಯೇ ಇರುವ ಸೈನಿಕ ಶಿಬಿರವನ್ನು ಸೇರಿದರು. ತನ್ನ ಮಂದಿರಕ್ಕೆ ಪ್ರವೇಶಿಸುವವರೆಗೂ ನಾಗಸಿಂಹನು ಒಂದು ಮಾತು ಸಹಾ ಮಾತಾಡಲಿಲ್ಲ. ಉತ್ತುಂಗನು ಕೂಡಾ ಮೌನವಾಗಿಯೇ ನಡೆದನು.

ನಾಗಸಿಂಹನು ತನ್ನ ಕೋಣೆಯಲ್ಲಿ ಇರುವ ಒಂದೇ ಒಂದು ಆಸನದಲ್ಲಿ ಕುಳಿತು, ಉತ್ತುಂಗನನ್ನು ಎದುರಿನಲ್ಲಿ ಇರುವ ಮುಕ್ಕಾಲು ಮಣೆಯ ಮೇಲೆ

ಕುಳಿತುಕೊಳ್ಳುವಂತೆ ಹೇಳಿದನು.

ಉತ್ತುಂಗನು ಕುಳಿತ ನಂತರ "ರಾಜರೊಂದಿಗೆ ಎಲ್ಲರೂ ಸಹಾ ನಿನ್ನ ಪ್ರಯಾಣವನ್ನು ಹೊಗಳುತ್ತಾ ಹಿಗ್ಗಿ ಹೋಗುತ್ತಿದ್ದಾರೆ ಅಲ್ಲವೇ? ಈಗ ಹೇಳು ನೀನು ಮಾಡುತ್ತಿರುವ ಈ ಸಾಹಸ ಪ್ರಯಾಣ ಏಕೆಂದು?'' ಎಂದು ಕೇಳಿದನು ನಾಗಸಿಂಹ ಹೇಳನೆಯಿಂದ.

ಅವನ ಮಾತಿನ ರೀತಿ ನೋಡಿ ಉತ್ತುಂಗನಿಗೆ ಕಳಕ್ಕೆಂದಿತು. ಆದರೂ ಆ ಕ್ಷಣವೇ ಸುಧಾರಿಸಿ ಕೊಂಡು, ಸ್ವಲ್ಪವೂ ವಿಚಲಿತನಾಗದೆ ತನ್ನ ಪ್ರಯಾಣ ವನ್ನು ಕುರಿತು ಎಲ್ಲಾ ವಿವರಗಳನ್ನು ಹೇಳಿ ತನ್ನ ಉದ್ದೇಶವನ್ನು ಸ್ಪಷ್ಟೀಕರಿಸಿದನು.

ಎಲ್ಲವನ್ನೂ ಕೇಳಿದ ನಾಗಸಿಂಹನು "ಇಷ್ಟು ದೂರ ಒಬ್ಬಂಟಿಗನಾಗಿ ಬಂದಿರುವ ಸಾಹಸವೀರನು ನೀನು. ಇಲ್ಲಿಂದ ಒಬ್ಬಂಟಿಗನಾಗಿ ಹೋಗ ಲಾರೆಯಾ? ನಿನ್ನ ಅಚಂಚಲವಾದ ಧೈರ್ಯ ಇಷ್ಟ ರಲ್ಲಿ ಚಂಚಲವೇಕಾಯಿತು?'' ಎಂದನು ಮತ್ತಷ್ಟು ಪರಿಹಾಸ್ಯದಿಂದ.

"ನಾನು ಒಬ್ಬನಾಗಿ ಹೋಗಬೇಕೆಂದೇ ಬಂದಿ ದ್ದೇನೆ. ನಿಜ ಹೇಳಬೇಕಾದರೆ ನಿಮ್ಮ ರಾಜ್ಯ ಇಲ್ಲಿ ರುವ ವಿಷಯವೇ ನನಗೆ ತಿಳಿಯದು. ಆದರೆ ನಿಮ್ಮ ಅರಸರು ಕರುಣಾಮೂರ್ತಿಗಳು. ನನ್ನ ಮೇಲೆ ಕರುಣೆ ತೋರಿ ನನಗೆ ಸಹಾಯವಾಗಿರಲು ಸೈನ್ಯ ಕಳುಹಿಸುತ್ತೇನೆ ಎಂದರು. ಮತ್ತೊಂದು ವಿಷಯವೇನೆಂದರೆ ರಾಕ್ಷಸೀ ಮೃಗವನ್ನು ಉಪಾಯ ವಾಗಿ ಮಾನವ ನಿವಾಸಕ್ಕೆ ಸಾಧ್ಯವಾದಷ್ಟು ದೂರಕ್ಕೆ ಕರೆದುಕೊಂಡು ಹೋಗಿ ಬಿಟ್ಟು ಬರಬೇಕೆಂದೇ ನನ್ನ ಗುರಿ. ಹಾಗೆ ಮಾಡುವುದರಿಂದ ಮಾಣಿಕ್ಯ ಪುರಿಗೆ ಮಾತ್ರವಲ್ಲ, ನಿಮ್ಮ ನಾಗಪುರಿಗೆ ಕೂಡಾ ಆ ಮೃಗದಿಂದ ರಕ್ಷಣೆ ದೊರೆಯುವುದು'' ಎಂದನು



ಉತ್ತುಂಗ.

"ನಾಗಪುರಿ ರಾಜ್ಯದ ಬಗ್ಗೆ ನೀನು ಯೋಚಿಸ ಬೇಡ. ರಾಕ್ಷಸೀ ಮೃಗವೇ ಅಲ್ಲ, ಎಷ್ಟೇ ಶತ್ರುಗಳು ಬಂದರೂ ಸರಿ, ನಮ್ಮ ರಾಜ್ಯವನ್ನು ಕಾಪಾಡಿ ಕೊಳ್ಳಲು ನಾವು ಇದ್ದೇವೆ. ಅದಕ್ಕೆ ನಿನ್ನ ಸಹಾಯ ಬೇಕಿಲ್ಲ. ಅದು ಸರಿ! ರಾಕ್ಷಸೀ ಮೃಗವನ್ನು ನೋಡಿರುವೆ ಎಂದು ಹೇಳುತ್ತಿರುವೆ. ಆದರೂ, ಈ ಕಾಲದಲ್ಲಿ ರಾಕ್ಷಸೀ ಮೃಗಗಳು ಎಲ್ಲಿವೆ? ನೀನು ಹೇಳುವ ಕಾಗೆ ಗೂಬೆ ಕಥೆ ನಂಬಲು, ಕೇಳುವ ಎಲ್ಲರೂ ಅಮಾಯಕರಲ್ಲ'' ಎಂದನು ನಾಗಸಿಂಹನು ಪರಿ ಹಾಸ್ಯದಿಂದ ನಗುತ್ತಾ.

"ನೀವು ನಂಬಿದರೂ, ನಂಬದಿದ್ದರೂ ಇದು ಖಂಡಿತವಾಗಿಯೂ ನಿಜ. ಆ ರಾಕ್ಷಸೀ ಮೃಗವನ್ನು ನಾನು ಕಣ್ಣಾರೆ ನೋಡಿದ್ದೇನೆ. ಅಷ್ಟೇ ಅಲ್ಲ ಅದು ಮಾಣಿಕ್ಯಪುರಿಯ ಸಮುದ್ರತೀರದಲ್ಲಿ ಸೃಷ್ಟಿಸಿದ



ಭೀಭತ್ಸವನ್ನು ನಮ್ಮ ಸೈನಿಕರು ಪ್ರತ್ಯಕ್ಷವಾಗಿ ನೋಡಿದ್ದಾರೆ. ಅದು ಪಾದ ಇಟ್ಟ ಕಡೆ ಎಲ್ಲಾ ಮನೆಗಳು, ಮರಗಳು ನೆಲಸಮವಾಗಿವೆ. ಆದ್ದರಿಂದ ಅದನ್ನು ಎದುರಿಸಿ ಹೋರಾಡುವುದರಲ್ಲಿ ಪ್ರಯೋಜನ ಇಲ್ಲ ಎಂದು ಸಾಧ್ಯವಾದಷ್ಟು ದೂರಕ್ಕೆ ಕರೆದುಕೊಂಡು ಹೋಗಿ ಬಿಟ್ಟು ಬರಬೇಕೆಂದು ನಮ್ಮ ಅರಸರು ನಿರ್ಣಯಿಸಿದ್ದಾರೆ. ಶತಾಬ್ದಿಕ ಪುಷ್ಪಗಳಿಗಾಗಿಯೇ ಆ ರಾಕ್ಷಸೀ ಮೃಗ ಮಾಣಿಕ್ಯಪುರಿಗೆ ಬರುತ್ತಿದೆ ಎಂದು ತಿಳಿಯಿತು. ಅದಕ್ಕೆ ಈ ಪುಷ್ಪಗಳ ಸಹಾಯದಿಂದ ಅದನ್ನು ಬಹುದೂರ ಪ್ರಾಂತ್ಯಕ್ಕೆ ತಲುಪಿಸಲು ನಾನು ಹೊರಟಿದ್ದೇನೆ. ಒಂದು ವೇಳೆ ನಿಮಗೆ ರಾಕ್ಷಸೀ ಮೃಗದ ಬಗ್ಗೆ ಭಯ ಇದ್ದರೆ ನೀವು ಬರಬೇಡಿ. ನಾನು ಒಬ್ಬನೇ ಹೊರಡುತ್ತೇನೆ'' ಎಂದನು ಉತ್ತುಂಗ ದೃಢವಾದ ಧ್ವನಿಯಿಂದ.

ಉತ್ತುಂಗನ ಮಾತು ಕೇಳುತ್ತಲೇ ನಾಗಸಿಂಹನ ಮುಖದಲ್ಲಿ ಕ್ರೋಧ ತುಂಬಿತು. ಕಣ್ಣುಗಳು ಕೆಂಪಗಾದವು. ಅವನು ತನ್ನ ಉದ್ರೇಕವನ್ನು ಅಡಗಿಸಿಕೊಂಡು ವಿಕಟವಾಗಿ ನಕ್ಕು, "ಭಯವೇ! ನನಗೇ!! ರಾಕ್ಷಸೀ ಮೃಗವನ್ನು ನೋಡಿ ನಾನು ಹೆದರುವೆನೇ? ಛೀ! ಛೀ! ಭಯ ಅಂದರೆ ಏನೆಂದು ತಿಳಿಯದ ವೀರನು ನಾನು. ಮೇಲಾಗಿ ಪ್ರಾಣವನ್ನು ಅಲ್ಪವಾಗಿ ತಿಳಿದು ಹೋರಾಡಲು ಶಿಕ್ಷಣ ಪಡೆದಿರುವ ದಳನಾಯಕನು ನಾನು ಎಂಬ ವಿಷಯವನ್ನು ನೀನು ಮರೆತು ಹೋದೆಯಾ?'' ಎಂದು ಕೇಳಿದನು.

"ಮಾಣಿಕ್ಯಪುರಿಯಲ್ಲಿ ಶಿಕ್ಷಣ ಪಡೆದ ಸೈನಿಕರು, ದಳನಾಯಕರು ಬಹಳ ಮಂದಿ ಇದ್ದಾರೆ. ಆದರೂ ಅವರು ರಾಕ್ಷಸೀ ಮೃಗದ ಹತ್ತಿರ ತಮ್ಮ ಶಕ್ತಿ, ಸಾಮರ್ಥ್ಯಗಳು ಫಲಿಸಲಾರವು ಎಂದು ಗ್ರಹಿಸಿದರು. ಅದಕ್ಕೆ ಮೃಗದಿಂದ ಪಾರಾಗಲು ಈ ಉಪಾಯವನ್ನು ಯೋಚಿಸಿದೆವು'' ಎಂದನು ಉತ್ತುಂಗ.

"ಸರಿ! ಆ ವಿಷಯ ಹಾಗಿರಲಿ. ನೀನು ತೆಗೆದುಕೊಂಡು ಬಂದ ಪುಷ್ಪಗಳು ಈಗ ಎಲ್ಲಿವೆ? ನಿನ್ನ ಕೋಣೆಯಲ್ಲಿ ಇದೆಯೇ? ಅದು ಒಟ್ಟು ಎಷ್ಟು ಇವೆ? ಎರಡೇ... ಮೂರೇ....'' ಎಂದು ಕೇಳಿದನು ನಾಗಸಿಂಹ.

"ಬಹಳ ಇವೆ. ಅರಳಿದ ಹೂವುಗಳನ್ನೆಲ್ಲಾ ಶೇಖರಿಸಿ ತಂದಿರುವೆನು. ದೋಣಿ ತಲೆಕೆಳಗಾದಾಗ, ಕೆಲವು ಸಮುದ್ರದ ಪಾಲಾದುವು. ಈಗ ಒಂದು ಗೊಂಚಲು ಹೂವುಗಳನ್ನು ರಾಜರಿಗೆ ಕೊಟ್ಟಿರುವೆನು. ಮಿಕ್ಕ ಹೂವುಗಳು ಕಾಡಿನ ನಾಯಕ ಕಾಬೂಯಿ ಹತ್ತಿರ ಇವೆ. ಹೊರಡುವುದಕ್ಕೆ ಮೊದಲು ನಾವು ಅವುಗಳನ್ನು ಎಲ್ಲಾ ತಂದುಕೊಳ್ಳಬೇಕು'' ಎಂದನು ಉತ್ತುಂಗ.



ನಾಗಸಿಂಹ ಅವನ ಕಡೆ ಅಲಕ್ಷ್ಯದಿಂದ ನಗುತ್ತಾ ನೋಡಿದ. ಅವನ ನೋಟದಲ್ಲಿ ಅಹಂಕಾರ ಇತ್ತು. ನಗುವಿನಲ್ಲಿ ಕಠೋರತೆ ಇತ್ತು. ಧ್ವನಿಯಲ್ಲಿ ದರ್ಪ ಇತ್ತು.

ಉತ್ತುಂಗನು ತನಗೆ ಆ ವಿಷಯ ಇದಕ್ಕೆ ಮುಂಚೆಯೇ ತಿಳಿದಿರುವುದನ್ನು ತೋರಿಸಿಕೊಳ್ಳದೆ, "ಹೌದೇ? ಈಗ ನನಗೆ ವಿಷಯ ಗೊತ್ತಾಯಿತು. ತುಂಬ ಸಂತೋಷ" ಎಂದು ಹೇಳಿದನು.

"ನಾವು ಯಾವಾಗ ಹೊರಡಬೇಕು ಎಂದು ಆಲೋಚಿಸಿ ನಿನಗೆ ತಿಳಿಯಪಡಿಸುತ್ತೇನೆ. ಆಮೇಲೆ ಇಬ್ಬರೂ ಸೇರಿ ಸೇನಾಧಿಪತಿ ಬಳಿಗೆ ಹೋಗೋಣ. ಅದುವರೆಗೂ ನೀನು ನಿನ್ನ ಬಿಡದಿಯಲ್ಲಿ ಇರು" ಎಂದನು ನಾಗಸಿಂಹ.

ಉತ್ತುಂಗನು ಅಲ್ಲಿಂದ ಹೊರಟು ತನ್ನ ಬಿಡದಿಗೆ ಹೋದನು. ಅಲ್ಲಿ ಕುಳಿತುಕೊಂಡು ಯಾರಿಂದ, ಯಾವಾಗ ಯಾವ ಸುದ್ದಿ ಬರುವುದೋ ಎಂದು ನಿರೀಕ್ಷಿಸತೊಡಗಿದನು. ಆದರೆ ಮಧ್ಯಾಹ್ನ ಕಳೆದರೂ ಯಾರೂ ಬರಲಿಲ್ಲ. ಸಂಜೆಯಾಗಿ ಕತ್ತಲಾಯಿತು. ಆದರೂ ದಳನಾಯಕನಿಂದಾಗಲೀ, ಸೇನಾಧಿಪತಿಯಿಂದಾಗಲೀ, ಅಥವಾ ಯುವರಾಣಿಯಿಂದಾಗಲೀ ಎಂಥಾ ಸುದ್ದಿಯೂ ಬರಲಿಲ್ಲ. ಅದರಿಂದ ರಾಜಭವನದಲ್ಲಿ ಯುವರಾಣಿ ಮಂದಿರದಿಂದ ಶತಾಬ್ಧಿಕ ಪುಷ್ಪಗಳು ಕಣ್ಮರೆಯಾಗಿವೆ ಎಂಬ ವಿಷಯವು ಸಹಾ ಅವನಿಗೆ ಇನ್ನೂ ತಿಳಿದು ಬಂದಿರಲಿಲ್ಲ.

ಮರುದಿನ ಬೆಳಿಗ್ಗೆ ಹೊತ್ತು ಕಳೆದ ಸ್ವಲ್ಪ ಸಮಯಕ್ಕೆ ಕಾಡಿನ ನಾಯಕ ಕಾಬೂಯಿ ಉತ್ತುಂಗನ ಬಿಡದಿಗೆ ಗಡಿಬಿಡಿಯಿಂದ ಬಂದನು. ಅವನನ್ನು ನೋಡುತ್ತಲೇ "ಏನಾಯಿತು ಕಾಬೂಯೀ" ಎಂದು ಕೇಳಿದನು ಆತುರತೆಯಿಂದ.

"ಅಂದರೆ ಆ ಹೂವುಗಳನ್ನು ನೋಡಬೇಕಾಗಿದ್ದರೆ ನಾನು ರಾಜಭವನಕ್ಕೆ ಹೋಗಬೇಕು ಎಂದಾಯಿತು" ಎಂದನು ನಾಗಸಿಂಹ.

"ಹೌದು. ಆದರೆ" ಎಂದು ಏನನ್ನೋ ಹೇಳಲು ಪ್ರಯತ್ನಿಸಿ ಸುಮ್ಮನಾದನು ಉತ್ತುಂಗ.

"ಆದರೆ ಏನು? ಆ ಹೂವುಗಳು ರಾಜಭವನದಲ್ಲಿ ಇಲ್ಲವೇ?" ಎಂದು ಗದರಿಸಿದನು ನಾಗಸಿಂಹ.

"ರಾಜರ ಬಳಿಯಿಂದ ಆ ಹೂವುಗಳನ್ನು ಯುವರಾಣಿ ತೆಗೆದುಕೊಂಡು ಹೋದುದನ್ನು ಮಾತ್ರ ನಾನು ನೋಡಿದೆ. ಆದರೆ ರಾಜಭವನದಲ್ಲಿ ಅವು ಎಲ್ಲಿವೆ ಎಂಬುದು ನನಗೆ ತಿಳಿಯದು" ಎಂದನು ಉತ್ತುಂಗ.

"ಆ ವಿಷಯ ನಿನಗೆ ಬೇಕಾಗಿಲ್ಲ. ಅದರ ಬಗ್ಗೆ ನಾನು ರಾಜರನ್ನೇ ಕೇಳಬಲ್ಲೆ. ಮಹಾರಾಣಿ ನನ್ನ ಅಕ್ಕ ಎಂಬ ವಿಷಯ ನಿನಗೆ ಗೊತ್ತೇ?" ಎಂದು

"ನೀನು ತೆಗೆದುಕೊಂಡು ಬಂದ ಶತಾಬ್ಧಿಕ ಪುಷ್ಪಗಳು ಕಾಣೆಯಾಗಿವೆ. ನೀನು ಬಂದಾಗ ತಿರುಗಿ ಕೊಡಬೇಕೆಂದು ಅವುಗಳನ್ನು ಜಾಗ್ರತೆಯಾಗಿ ತೆಗೆದಿರಿಸುವಂತೆ ನಾನು ನನ್ನ ಮಗಳು ಚಿತ್ರಳಿಗೆ ಎಚ್ಚರಿಸಿದ್ದೆ. ಅವಳು ಸಹಾ ಅವುಗಳನ್ನು ತನ್ನ ಗೆಳತಿಯರಿಗೆ ಕೂಡಾ ಕೊಡದೆ, ತನ್ನ ಕೋಣೆಯಲ್ಲಿ ಭದ್ರವಾಗಿರಿಸಿದ್ದಳು. ಈ ದಿನ ಬೆಳಿಗ್ಗೆ ಎದ್ದು ನೋಡಿದಾಗ ಹೂವುಗಳು ಕಾಣಿಸಲಿಲ್ಲ. ಅವಳು ಹೂಗಳನ್ನು ಭದ್ರವಾಗಿರಿಸಿದ್ದ ಕೋಣೆಯಲ್ಲಿ ರಾತ್ರಿ ಯಾರೂ ಬಂದ ಹಾಗೆ ಸುಳಿವು ಇಲ್ಲ. ತನ್ನನ್ನು ಆಟವಾಡಿಸಲು ತನ್ನ ಗೆಳತಿಯರು ತೆಗೆದು ಬಿಟ್ಟಿರುವರೇನೋ ಎಂದು ಚಿತ್ರ ಅವರೆಲ್ಲರನ್ನೂ ಕೇಳಿದಳು. ಆದರೆ ಅವರು ತಮಗೆ ಏನೂ ಗೊತ್ತಿಲ್ಲವೆಂದು ಹೇಳಿದರು. ಹೂವುಗಳು ಹೇಗೆ ಹೋದುವೆಂದು ನನಗೆ ಸ್ವಲ್ಪವೂ ಅರ್ಥವಾಗುತ್ತಿಲ್ಲ. ಎಲ್ಲಾ ಮಾಯದಂತೆ ಇದೆ. ಅಲ್ಲಿಗೆ ರಾಕ್ಷಸೀ ಮೃಗ ಬರುವ ಅವಕಾಶ ಇಲ್ಲವಲ್ಲಾ'' ಎಂದನು ಕಾಬೂಯಿ ವಿಷಾದದಿಂದ.

"ಸಮುದ್ರ ತೀರದಲ್ಲಿ ಬಂಡೆಗಳ ನಡುವೆ ಇರುವ ಇಕ್ಕಟ್ಟಾದ ಮಾರ್ಗದಿಂದ ಅಷ್ಟು ದೊಡ್ಡ ರಾಕ್ಷಸೀ ಮೃಗ ಬರಲಾರದು. ಒಂದು ವೇಳೆ ಬಂದಿದೆ ಎಂದು ಭಾವಿಸಿದರೂ, ಅದು ಅಡಿ ಇಟ್ಟ ಕಡೆ ಎಲ್ಲಾ ಸರ್ವನಾಶ ಆಗುತ್ತಿತ್ತು. ಅದರಿಂದ ಅದು ರಾಕ್ಷಸೀ ಮೃಗದ ಕೆಲಸ ಅಲ್ಲವೇ ಅಲ್ಲ'' ಎಂದನು ಉತ್ತುಂಗನು ದೃಢವಾಗಿ.

"ಮತ್ತೆ ಇದು ಯಾರ ಕೆಲಸ ಎಂದು ಭಾವಿಸುವೆ?'' ಎಂದು ಕೇಳಿದನು ಕಾಬೂಯಿ.

ಉತ್ತುಂಗನು ಸ್ವಲ್ಪ ಸಮಯ ಮೌನವಾಗಿ ಆಲೋಚಿಸಿ "ದಳನಾಯಕ ನಾಗಸಿಂಹ ನಿನ್ನೆಯೋ ರಾಜಧಾನಿಗೆ ಬಂದಿರುವನು. ರಾಜ, ಸೇನಾಧಿಪತಿ, ನಾಗಸಿಂಹನನ್ನು ನನ್ನ ಸಂಗಡ ಕಳುಹಿಸಲು ನಿಶ್ಚಯಿಸಿದ್ದರು. ಮಾತುಗಳ ಸಂದರ್ಭದಲ್ಲಿ ನಾನೇ



ಅವನಿಗೆ ಶತಾಬ್ಧಿಕ ಪುಷ್ಪಗಳು ನಿಮ್ಮ ಹತ್ತಿರ ಇರುವುದು ಎಂದು ಹೇಳಿದ್ದ. ನಾಗಸಿಂಹನು ನಾಗಪುರಿಯ ಸಿಂಹಾಸನಕ್ಕಾಗಿ ಸಂಚು ಮಾಡುತ್ತಿರುವನೆಂದು ಯುವರಾಣಿ ನನಗೆ ತಿಳಿಸಿದ್ದರು. ಅವನ ಮೂಲಕ ರಾಜರಿಗೆ ಸಹ ಆಪತ್ತು ಸಂಭವಿಸುವ ಅವಕಾಶ ಇದೆ. ಆದರಿಂದ ನಾಗಸಿಂಹನು ನಿಮ್ಮ ಮನೆಯಲ್ಲಿರುವ ಶತಾಬ್ಧಿಕ ಪುಷ್ಪಗಳನ್ನು ಅಪಹರಿಸಿರಬಹುದು ಎಂದು ನನಗೆ ತೋರುತ್ತಿದೆ'' ಎಂದು ಯುವರಾಣಿ ತನಗೆ ಹೇಳಿದ ವಿಷಯಗಳನ್ನು ಕಾಬೂಯಿಗೆ ಹೇಳಿದನು.

"ನಾಗಸಿಂಹನಿಗೆ ರಾಜರ ಮೇಲೆ ಅಸೂಯೆ, ದ್ವೇಷಗಳಿವೆ ಎಂದೂ, ಅವನು ನಾಗಪುರಿಯ ಸಿಂಹಾಸನಕ್ಕಾಗಿ ಕನಸು ಕಾಣುತ್ತಿರುವನೆಂದೂ ನಾನು ಇದಕ್ಕೆ ಮೊದಲೇ ಕೇಳಿದ್ದೇನೆ. ಅಂಥಾ ದುರ್ಮಾರ್ಗನನ್ನು ನಿನಗೆ ರಕ್ಷಣೆಯಾಗಿ ಕಳುಹಿಸಬೇಕೆಂದುಕೊಂಡಿದ್ದು ದುರದೃಷ್ಟ. ಅವನೊಂದಿಗೆ ನೀನು ಬಹಳ ಎಚ್ಚರಿಕೆಯಿಂದ ವ್ಯವಹರಿಸಬೇಕು. ದಳನಾಯಕನು ನಿನಗೆ ಸುದ್ದಿ ಕಳುಹಿಸುವುದಾಗಿ ಹೇಳಿರುವುದರಿಂದ ನೀನು ಇಲ್ಲಿಯೇ ಇರು. ನಾನು ಮಾತ್ರ ಹೋಗಿ ರಾಜರಿಗೆ ಹೂವು ಕಣ್ಮರೆಯಾದ ವಿಷಯ ತಿಳಿಸಿ ಬರುತ್ತೇನೆ'' ಎಂದು ಉತ್ತುಂಗನೊಂದಿಗೆ ಹೇಳಿ ಕಾಬೂಯಿ ಅಲ್ಲಿಂದ ರಾಜರ ಬಳಿ ಹೋದನು.

ಕಾಬೂಯಿಯ ಮಾತುಗಳನ್ನು ಕೇಳಿದ ರಾಜನು "ನಿಮ್ಮ ಮನೆಯಲ್ಲಿ ಬಚ್ಚಿಟ್ಟ ಶತಾಬ್ಧಿಕ ಪುಷ್ಪಗಳು ಕೂಡ ಕಾಣೆಯಾಗಿವೆಯೇ? ರಾಕ್ಷಸೀ ಮೃಗಕ್ಕೆ ಮಾತ್ರ ಅಲ್ಲ, ಬೇರೆ ಯಾರಿಗೋ ಆ ಹೂವುಗಳ ಆವಶ್ಯಕತೆ ಇದೆ ಎಂದಾಯ್ತು'' ಎಂದು ತುಸು ಸಮಯ ಆಲೋಚಿಸಿ, ಸೇನಾಧಿಪತಿಗೆ ಹೇಳಿ ಕಳುಹಿಸಿದನು.

ಸೇನಾಧಿಪತಿ ಬರುತ್ತಲೇ "ದುರ್ಜಯಾ! ಕಾಬೂಯಿ ಮನೆಯಲ್ಲಿ ಇರುವ ಪುಷ್ಪಗಳು ಮಾಯವಾಗಿದೆಯಂತೆ. ಯಾವುದೋ ಸಂಚು ಪ್ರಾರಂಭ ಆದಂತೆ ಇದೆ'' ಎಂದನು ರಾಜ ಆವೇಶದಂತೆ.

"ಎಲ್ಲಾ ವಿಚಿತ್ರವಾಗಿದೆ ಪ್ರಭೂ! ಸಂಚು ಮಾಡಿದವರನ್ನು ಕಂಡು ಹಿಡಿದು ಶೀಘ್ರದಲ್ಲೇ ಹೊರಗೆಳೆದು, ಅವರನ್ನು ದಂಡಿಸುತ್ತೇನೆ'' ಎಂದನು ಸೇನಾಧಿಪತಿ.

ಕಾಬೂಯಿ, ಉತ್ತುಂಗನು ತನಗೆ ಹೇಳಿದ ವಿಷಯಗಳನ್ನು ಸೇನಾಧಿಪತಿಗೆ ಹೇಳಿದನು.

"ಅದೇ ವಿಷಯ! ಅಂದರೆ ಶತಾಬ್ಧಿಕ ಪುಷ್ಪಗಳು ನಿಮ್ಮ ಮನೆಯಲ್ಲಿ ಇರುವ ವಿಷಯ ನಾಗಸಿಂಹನಿಗೆ ತಿಳಿದಿದೆ ಎಂದಾಯ್ತು'' ಎಂದನು ಸೇನಾಧಿಪತಿ ತಲೆ ಆಡಿಸುತ್ತಾ.

(ಇನ್ನೂ ಇದೆ)





# ವಿಚಿತ್ರಪುಷ್ಪ

## ೧೧

[ದಳನಾಯಕ ನಾಗಸಿಂಹನ ನಾಯಕತ್ವದಲ್ಲಿ ಕೆಲವು ಸೈನಿಕರನ್ನು ಉತ್ತುಂಗನ ಸಮುದ್ರ ಪ್ರಯಾಣದಲ್ಲಿ ಸಹಾಯವಾಗಿ ಕಳುಹಿಸಲು ನಾಗಪುರಿಯ ರಾಜನು ನಿರ್ಣಯಿಸಿದನು. ಸೇನಾಧಿಪತಿ ಉತ್ತುಂಗನಿಗೆ ಆ ದಿನವೇ ರಾಜ್ಯದ ಗಡಿಯಿಂದ ಬಂದ ನಾಗಸಿಂಹನನ್ನು ಪರಿಚಯ ಮಾಡಿಸಿದನು. ಗ್ರಾಮದಲ್ಲಿ ತನ್ನ ಮನೆಯಲ್ಲಿ ಬಚ್ಚಿಟ್ಟಿದ್ದ ಶತಾಬ್ದಿಕ ಪುಷ್ಪಗಳು ಸಹಾ ಕಾಣದಾಗಿವೆ ಎಂದು ಕಾಬೂಯಿ ವಿಚಾರದಿಂದ ರಾಜಧಾನಿಗೆ ಬಂದನು. ಕಾಬೂಯಿ ಸೇನಾಧಿಪತಿ ಬಳಿ ವಿಷಯ ಹೇಳಿದನು.]

"ಶತಾಬ್ದಿಕ ಪುಷ್ಪಗಳು ನಿಮ್ಮ ಮನೆಯಲ್ಲಿ ಇದ್ದ ವಿಷಯ ಉತ್ತುಂಗನು ನಾಗಸಿಂಹನಿಗೆ ಹೇಳಿರುವನು. ಅಂದರೆ ಅವುಗಳನ್ನು ನಾಗಸಿಂಹನು ಅಪಹರಿಸಿರಬಹುದಲ್ಲವೇ?'' ಎಂದು ಕೇಳಿದನು ಸೇನಾಧಿಪತಿ.

ಕಾಬೂಯಿ ತುಸು ಸಮಯ ಮೌನವಾಗಿ ಆಲೋಚಿಸಿ "ನಾಗಸಿಂಹನು ಒಂದು ವೇಳೆ ಸಂಚು ಮಾಡಬೇಕೆಂದುಕೊಂಡರೂ ಈ ಪುಷ್ಪಗಳು ಆತನಿಗೆ ಹೇಗೆ ಉಪಯೋಗವಾಗುತ್ತದೆ ಎಂದು ನನಗೆ ಅರ್ಥವಾಗುತ್ತಿಲ್ಲ'' ಎಂದನು.

"ನೀನು ಹೇಳುವುದು ನಿಜವೇ! ಶತಾಬ್ದಿಕ ಪುಷ್ಪಗಳಿಲ್ಲದೇ ಉತ್ತುಂಗನು ಹೊರಡಲಾರ. ಅದರಿಂದ ಅವು ಸಿಗುವವರೆಗೂ ನೀನು ರಾಜಧಾನಿಯಲ್ಲಿ ಇರುವುದು ಒಳ್ಳೆಯದು'' ಎಂದನು ಸೇನಾಧಿಪತಿ.

"ಹಾಗೆಯೇ ಇರುತ್ತೇನೆ'' ಎಂದು ಹೇಳಿ ಕಾಬೂಯಿ ಅಲ್ಲಿಂದ ಉತ್ತುಂಗನ ಬಿಡದಿಗೆ ಹೋದನು. ಅವರಿಬ್ಬರೂ ಆ ಹೂಗಳ ಬಗ್ಗೆ



ನಿಜವೇ?'' ಎಂದನು ಕಾಬೂಯಿ ನಂಬಲಾರದವನಂತೆ.

"ಹೌದು ಅಪ್ಪಾ. ನಿಜವೇ! ನಾವು ಈ ದಿನ ಬೆಳಿಗ್ಗೆ ಎಂದಿನಂತೆ ಸಮುದ್ರ ತೀರಕ್ಕೆ ಹೋದೆವು. ಅಲ್ಲಿ ಉತ್ತುಂಗನು ಬಂದ ದೋಣಿ ಬೋರಲಾಗಿ ಬಿದ್ದಿರುವುದು ಕಂಡಿತು. ಹತ್ತಿರ ಹೋಗಿ ನೋಡಿದಾಗ ಒಳಗೆ ಶತಾಬ್ದಿಕ ಪುಷ್ಪಗಳು ಕಟ್ಟು ಕಟ್ಟಾಗಿ ಇರುವುದನ್ನು ನೋಡಿದೆವು. ದೋಣಿಯನ್ನು ಸಮುದ್ರದ ನೀರಿನತ್ತ ಎಳೆದಂತೆ ಮರಳಿನ ಮೇಲೆ ಎರಡು ಗೆರೆಗಳು ಕಂಡಿತು. ಬಹುಶಃ ಉತ್ತುಂಗನೇ ಹೊರಟು ಹೋಗಲು ಪ್ರಯತ್ನಿಸಿರಬಹುದೆಂದು ನಾವು ಭಾವಿಸಿದೆವು'' ಎಂದಳು ಚಿತ್ರ. ಆಗಲೇ ಅಲ್ಲಿಗೆ ಉತ್ತುಂಗನು ಕೂಡ ಬಂದನು.

"ಇಲ್ಲ ಚಿತ್ರಾ, ಅವನು ರಾತ್ರಿ ಇಲ್ಲೇ ಇದ್ದನು. ಈಗ ಆ ಪುಷ್ಪಗಳು ಎಲ್ಲಿವೆ?'' ಎಂದು ಕೇಳಿದನು ಕಾಬೂಯಿ.

"ಅಲ್ಲೇ ಸಮುದ್ರ ತೀರದಲ್ಲಿರುವ ದೋಣಿಯಲ್ಲೇ ಇವೆ. ಈ ಸಂತೋಷದ ಸುದ್ದಿ ನಿಮಗೆ ತಿಳಿಸಬೇಕೆಂದೇ ನನ್ನ ಗೆಳತಿಯನ್ನು ಕರೆದುಕೊಂಡು ಬಂದೆ'' ಎಂದಳು ಚಿತ್ರ.

ಕಾಬೂಯಿ ಅಪ್ಯಾಯತೆಯಿಂದ ಮಗಳ ಭುಜದ ಮೇಲೆ ಕೈ ಹಾಕಿ "ತುಂಬಾ ಸಂತೋಷ ಚಿತ್ರಾ! ನೀವು ಇಲ್ಲೇ ಇರಿ. ನಾವು ಹೋಗಿ ಸೇನಾಧಿಪತಿಗೆ ಈ ವಿಷಯ ಹೇಳಿ ಬರುತ್ತೇವೆ'' ಎಂದು ಉತ್ತುಂಗನ ಕಡೆ ತಿರುಗಿ, "ಬಾ ಹೋಗೋಣ'' ಎಂದು ಮುಂದೆ ನಡೆದನು.

ಉತ್ತುಂಗನು "ಶತಾಬ್ದಿಕ ಪುಷ್ಪಗಳು ಸಿಕ್ಕಿತೇ? ನಿಮ್ಮ ಮಗಳು ಏನು ಹೇಳಿದಳು ಕಾಬೂಯಿ?'' ಎಂದು ಕೇಳಿದನು ಅವನ ಸಂಗಡ ನಡೆಯುತ್ತಾ.

ಕಾಬೂಯಿ ತನ್ನ ಮಗಳು ಹೇಳಿದ ಎಲ್ಲ

ಬಹಳ ಸಮಯ ಚರ್ಚಿಸಿ ತುಂಬಾ ಹೊತ್ತಾದ ನಂತರ ನಿದ್ರೆ ಮಾಡಲು ತೊಡಗಿದರು.

ಮರುದಿನ ಮಧ್ಯಾಹ್ನ ಒಬ್ಬ ಸೈನಿಕನು ಬಂದು "ಕಾಬೂಯಿ, ನಿನ್ನನ್ನು ನೋಡಲು ಇಬ್ಬರು ಯುವತಿಯರು ಬಂದಿರುವರು'' ಎಂದನು.

ಕಾಬೂಯಿ ಕೋಣೆಯ ಹೊರಗೆ ಬಂದು ಅಲ್ಲಿರುವ ಇಬ್ಬರು ಯುವತಿಯರಲ್ಲಿ ಒಬ್ಬಳನ್ನು ನೋಡಿ "ಅಮ್ಮಾ ಚಿತ್ರಾ, ನೀನಾ! ಈಗ ಏಕೆ ಬಂದೆ? ನಿಮ್ಮ ತಾಯಿ ಕ್ಷೇಮವಾಗಿರುವಳಷ್ಟೇ'' ಎಂದು ಆತುರತೆಯಿಂದ ಕೇಳಿದನು.

"ಅಮ್ಮ ಕ್ಷೇಮವಾಗಿ ಇದ್ದಾಳೆ ಅಪ್ಪಾ'' ಎಂದು ಹೇಳುತ್ತಾ ಅವಳು ತಂದೆಯನ್ನು ಸಮೀಪಿಸಿ "ಕಾಣದಾಗಿದ್ದ ಹೂಗಳು ಕಾಣಿಸಿದವು ಅಪ್ಪಾ'' ಎಂದಳು ಮೆಲ್ಲನೆ.

"ಶತಾಬ್ದಿಕ ಪುಷ್ಪಗಳು ದೊರಕಿದವೇ? ಎಲ್ಲಿ?



ವಿಷಯಗಳನ್ನು ಉತ್ತುಂಗನಿಗೆ ಹೇಳಿದನು. ಶತಾಬ್ಧಿಕ ಪುಷ್ಪಗಳು ಸಿಕ್ಕಿತೆಂದು ತಿಳಿದು ಉತ್ತುಂಗನು ಬಹಳ ಸಂತೋಷಿಸಿದನು. ಆದರೆ ಆ ಹೂವುಗಳನ್ನು ತೆಗೆದುಕೊಂಡು ತನ್ನ ದೋಣಿಯಲ್ಲಿ ಹೋಗಬೇಕೆಂದು ಪ್ರಯತ್ನಿಸಿದವನು ಯಾರಾಗಿರಬಹುದು? ಅವನ ಉದ್ದೇಶ ಏನಾಗಿರಬಹುದು? ಹೀಗೆ ವಿಧವಿಧವಾಗಿ ಯೋಚಿಸುತ್ತಾ, ಉತ್ತುಂಗ ಹಾಗೂ ಕಾಬೂಯಿ ಸೇನಾಧಿಪತಿ ಭವನವನ್ನು ಸಮೀಪಿಸಿದರು. ಅವರನ್ನು ನೋಡುತ್ತಲೇ ಸೇನಾಧಿಪತಿ "ಏನಾಯ್ತು?'' ಎಂದು ಕೇಳಿದನು. ಕಾಬೂಯಿ ವಿಷಯ ತಿಳಿಸಿದನು.

"ಶಭಾಶ್! ಈ ಶುಭ ವಾರ್ತೆ ತಂದ ಸೈನಿಕರು ಎಲ್ಲಿ?'' ಎಂದನು ಸೇನಾಧಿಪತಿ.

"ಸೈನಿಕರು ಅಲ್ಲ ಪ್ರಭೂ! ಈ ಸುದ್ದಿಯನ್ನು ನನ್ನ ಮಗಳು ಚಿತ್ರ ಬಂದು ತಿಳಿಸಿದಳು'' ಎಂದು ಕಾಬೂಯಿ ಎಲ್ಲ ವಿಷಯಗಳನ್ನು ವಿವರಿಸಿದನು.

"ಹೌದೇನು? ಬಹಳ ಸಂತೋಷ. ಆ ಪುಷ್ಪಗಳಿಗೆ ರಕ್ಷಣೆಯ ಏರ್ಪಾಡು ಮಾಡಬೇಕು. ಈಗಲೇ ನಮ್ಮ ಕೆಲವು ಸೈನಿಕರನ್ನು ಕಳುಹಿಸುತ್ತೇನೆ. ಮೊದಲು ಈ ವಿಷಯವನ್ನು ಅರಸರಿಗೆ ತಿಳಿಸಬೇಕು. ನಡೆಯಿರಿ'' ಎಂದು ಅಲ್ಲಿಂದ ಹೊರಟನು.

ಅವರಿಂದ ವಿಷಯಗಳನ್ನು ತಿಳಿದುಕೊಂಡ ರಾಜನು "ಬಹಳ ಸಂತೋಷ, ಸೇನಾಧಿಪತಿ. ಆ ಪುಷ್ಪಗಳನ್ನು ರಾಕ್ಷಸೀ ಮೃಗದ ಹತ್ತಿರ ಸೇರಿಸಲು ಇನ್ನು ಸ್ವಲ್ಪವೂ ಆಲಸ್ಯ ಮಾಡಬಾರದು. ಏನು ಹೇಳುವೆ ಕಾಬೂಯಿ?'' ಎಂದು ಉತ್ತುಂಗನತ್ತ ನೋಡಿ "ಯಾವಾಗ ಹೊರಡುವೆ?'' ಎಂದು ಕೇಳಿದನು.

"ಈ ಕ್ಷಣವೇ ಹೊರಡಲು ಅಪ್ಪಣೆಯಾದರೆ ಸಿದ್ಧವಾಗಿದ್ದೇನೆ ಪ್ರಭೂ!'' ಎಂದನು ಉತ್ತುಂಗ.

"ಶಭಾಶ್ ಉತ್ತುಂಗಾ!'' ಎಂದು ರಾಜನು ಎದ್ದು ನಿಂತು ಉತ್ತುಂಗನ ಭುಜದ ಮೇಲೆ ಕೈ ಹಾಕಿ "ನಿನ್ನಂಥಾ ಸಾಹಸವೀರರೇ ಯಾವ ರಾಜ್ಯಕ್ಕಾದರೂ ನಿಜವಾದ ಬೊಕ್ಕಸ. ಮರಳಿ ಹೋಗುವಾಗ ನಮ್ಮ ರಾಜ್ಯಕ್ಕೆ ಖಂಡಿತ ಬಂದು ಹೋಗು'' ಎಂದು ಹೇಳಿ ಸೇನಾಧಿಪತಿಯ ಕಡೆ ತಿರುಗಿ "ಈ ದಿನವೇ ಉತ್ತುಂಗನ ಪ್ರಯಾಣಕ್ಕೆ ಬೇಕಾಗಿರುವ ಎಲ್ಲಾ ಏರ್ಪಾಡುಗಳನ್ನು ಮಾಡು. ನಾನು ಹೋಗಿ ಶತಾಬ್ಧಿಕ ಪುಷ್ಪಗಳು ದೊರೆತ ವಿಷಯ ಮಲ್ಲಿಕಳಿಗೆ ಹೇಳುತ್ತೇನೆ'' ಎಂದು ಭವನದ ಒಳಗೆ ಹೊರಟು ಹೋದನು.

ರಾಜಭವನದಿಂದ ಹೊರಗೆ ಬಂದ ಸೇನಾಧಿಪತಿ, ನಾಗಸಿಂಹನಿಗೆ ಹೇಳಿ ಕಳುಹಿಸಿದನು.

ಸ್ವಲ್ಪ ಸಮಯದ ನಂತರ ಅಲ್ಲಿಗೆ ಬಂದ ದಳನಾಯಕ ನಾಗಸಿಂಹನು, ಸೇನಾಧಿಪತಿ, ಕಾಬೂಯಿ,

ಉತ್ತುಂಗ ಎಲ್ಲರೂ ಒಂದೇ ಕಡೆ ಇರುವುದನ್ನು ನೋಡಿ ಒಂದು ಕ್ಷಣ ಬೆಚ್ಚಿ ಬಿದ್ದನು. ಆಮೇಲೆ ಸುಧಾರಿಸಿಕೊಂಡು ಸೇನಾಧಿಪತಿಗೆ ನಮಸ್ಕರಿಸಿದನು.

"ಈ ದಿನವೇ ಉತ್ತುಂಗನ ಪ್ರಯಾಣ. ನೀನು, ನಮ್ಮ ಕೆಲವು ಸೈನಿಕರೊಂದಿಗೆ ಆತನ ರಕ್ಷಣೆಗಾಗಿ ಹೊರಡಬೇಕು. ಇದು ರಾಜಾಜ್ಞೆ" ಎಂದನು ಸೇನಾಧಿಪತಿ.

"ಈ ದಿನವೇ! ಮತ್ತೆ ಪುಷ್ಪಗಳು ದೊರೆಯಿತೇ ಸೇನಾಧಿಪತಿ" ಎಂದು ಕೇಳಿದನು ನಾಗಸಿಂಹ ಅತ್ಯಂತ ಆಶ್ಚರ್ಯದಿಂದ.

"ಪುಷ್ಪಗಳೇ! ಆ ವಿಷಯ ನಿನಗೇಕೆ?" ಎಂದು ಕೇಳಿದನು ಸೇನಾಧಿಪತಿ ಕಟುವಾಗಿ.

"ಹೌದು, ಅವುಗಳನ್ನು ರಾಕ್ಷಸೀ ಮೃಗ ಇರುವ ಸ್ಥಳಕ್ಕೆ ಸೇರಿಸಲೇ ಈ ಪ್ರಯಾಣ. ಈ ದಿನ ಸಾಯಂಕಾಲ ನೀವು ಸಮುದ್ರ ತೀರಕ್ಕೆ ಬನ್ನಿ. ಬಂಡೆಗಳ ಮಧ್ಯದ ದಾರಿಯಿಂದ ಸಮುದ್ರಕ್ಕೆ ದೋಣಿಯಲ್ಲಿ ಹೊರಡಿ. ನಿಮ್ಮ ಹಿಂದೆ ಎರಡು ದೋಣಿಗಳಲ್ಲಿ ನಮ್ಮ ಸೈನಿಕರು ಬರುತ್ತಾರೆ. ಮಿಕ್ಕ ವಿಷಯಗಳನ್ನು ಉತ್ತುಂಗನು ನೋಡಿಕೊಳ್ಳುತ್ತಾನೆ" ಎಂದನು ಸೇನಾಧಿಪತಿ.

"ಮತ್ತೆ... ಪುಷ್ಪಗಳು" ಎಂದು ಏನೋ ಹೇಳಲು ಪ್ರಯತ್ನಿಸಿ ಸುಮ್ಮನಾದನು ನಾಗಸಿಂಹ.

"ಎಲ್ಲವೂ ಸಿದ್ಧವಾಗಿದೆ ಎಂದು ಹೇಳಿದೆನಲ್ಲವೇ? ನೀನು ಹೊರಡುವುದು ಒಂದೇ ಉಳಿದಿರುವುದು" ಎಂದನು ಸೇನಾಧಿಪತಿ.

"ಅಪ್ಪಣೆ ಸೇನಾಧಿಪತಿ" ಎಂದು ನಾಗಸಿಂಹನು ಅಲ್ಲಿಂದ ವೇಗವಾಗಿ ಹೊರಟು ಹೋದನು.

ಆಮೇಲೆ ಸೇನಾಧಿಪತಿ ಉತ್ತುಂಗನೊಂದಿಗೆ "ಪುಷ್ಪಗಳು ಕಳುವಾದ ವಿಷಯ ನಾಗಸಿಂಹನಿಗೆ ತಿಳಿದೇ ಇರುತ್ತದೆ. ಆದರೂ ಈಗ ವಿಚಾರಣೆಗೆ



ಸಮಯ ಅಲ್ಲ. ಅವನು ಒಬ್ಬಂಟಿಗನಾಗಿ ರಾಕ್ಷಸೀ ಮೃಗವನ್ನು ಎದುರಿಸಲಾರ. ಅದರಿಂದ ನಿನಗೆ ಕೇಡು ಮಾಡುವ ಅವಕಾಶ ಇಲ್ಲ. ಆದರೂ ನೀನು ನಾಗಸಿಂಹನ ವಿಷಯದಲ್ಲಿ ಎಚ್ಚರಿಕೆಯಿಂದ ಇರ ಬೇಕಾದದ್ದು ಅತ್ಯವಶ್ಯ" ಎಂದು ಹೇಳಿದನು.

"ಸರಿ" ಎಂದನು ಉತ್ತುಂಗ ವಿನಯದಿಂದ.

ಸೇನಾಧಿಪತಿ ಕಾಬೂಯಿಯೊಂದಿಗೆ "ನೀನು ಉತ್ತುಂಗನ ಹಿಂದೆ ಸಮುದ್ರ ತೀರಕ್ಕೆ ಹೋಗಿ ಆತನನ್ನು ಬೀಳ್ಕೊಟ್ಟು ಬಾ" ಎಂದನು.

"ಅಪ್ಪಣೆ ಸೇನಾಧಿಪತಿ" ಎಂದು ಕಾಬೂಯಿ ಉತ್ತುಂಗನನ್ನು ಕರೆದುಕೊಂಡು, ಅವರು ಉಳಿದು ಕೊಂಡಿದ್ದ ಬಿಡದಿಗೆ ಹೋದನು. ಅವರಿಗಾಗಿ ಎದುರು ನೋಡುತ್ತಿದ್ದ ಚಿತ್ರ್ರಳ ಬಳಿ ಎಲ್ಲ ವಿಷಯ ಗಳನ್ನೂ ಹೇಳಿದನು ಕಾಬೂಯಿ.

ಸ್ವಲ್ಪ ಸಮಯದ ನಂತರ ದಳನಾಯಕ ನಾಗ



ಸಿಂಹನು ಅಲ್ಲಿಗೆ ಬಂದನು. ಎಲ್ಲರೂ ಸಮುದ್ರ ತೀರಕ್ಕೆ ಹೊರಟರು. ನಾಗಸಿಂಹನು ಒಂದು ಮಾತನ್ನು ಸಹಾ ಮಾತಾಡಲಿಲ್ಲ. ಅವನ ಮುಖದಲ್ಲಿ ತೀರದ ವೇದನೆ, ನಿರುತ್ಸಾಹ ಎದ್ದು ಕಾಣಿಸಿತು.

ಸೈನಿಕರು ಅವರನ್ನು ನೋಡುತ್ತಲೇ ಕೈಗಳನ್ನು ಎತ್ತಿ ದಳನಾಯಕನಿಗೆ ನಮಸ್ಕಾರ ಮಾಡುತ್ತಾ ಆಹ್ವಾನಿಸಿದರು. ಅಲ್ಲಿ ಮೂರು ದೋಣಿಗಳು ಸಿದ್ಧವಾಗಿತ್ತು. ಒಂದು ದೋಣಿಯಲ್ಲಿ ಶತಾಬ್ಧಿಕ ಪುಷ್ಪಗಳು ಇದ್ದವು. ಅವು ಆಗತಾನೇ ಅರಳಿದಂತೆ ತಳತಳನೆ ಹೊಳೆಯುತ್ತಾ ಸುವಾಸನೆಯನ್ನು ಹರಡುತ್ತಿದ್ದುವು. ಹೂವುಗಳು ಇದ್ದ ದೋಣಿ ತಾನು ಬಂದಿದ್ದೇ ಎಂದು ಉತ್ತುಂಗನು ಗ್ರಹಿಸಿದನು. ಅವನು ತನ್ನ ಸೊಂಟಕ್ಕೆ ಕಟ್ಟಿದ್ದ ಚೀಲದಲ್ಲಿ ಬಚ್ಚಿಟ್ಟಿದ್ದ ಶತಾಬ್ಧಿಕ ಸಸಿಗಳನ್ನು ತೆಗೆದು ಚಿತ್ರಳಿಗೆ ಕೊಟ್ಟು ಅವುಗಳನ್ನು ಮನೆಯ ಬಳಿ ಬೆಳೆಸುವಂತೆ ಕೈ ಸನ್ನೆಗಳಿಂದ ತಿಳಿಸಿದನು.

ಸಸಿಗಳನ್ನು ತೆಗೆದುಕೊಂಡ ಚಿತ್ರ, ಉತ್ತುಂಗನನ್ನು ವ್ಯಸನದಿಂದ ನೋಡಿದಳು.

ಶತಾಬ್ಧಿಕ ಪುಷ್ಪಗಳನ್ನು ನೋಡಿದ ತಕ್ಷಣ ನಾಗಸಿಂಹನಲ್ಲಿ ಎಲ್ಲಿಲ್ಲದ ಉತ್ಸಾಹ ತುಂಬಿ ಬಂತು. ಉತ್ತುಂಗನು ಏಕೆ ಆಲಸ್ಯ ಮಾಡುತ್ತಿದ್ದಾನೆ ಎನ್ನುವಂತೆ ಅವನತ್ತ ನೋಡತೊಡಗಿದನು. ಅದನ್ನು ಗ್ರಹಿಸಿದ ಕಾಬೂಯಿ "ಉತ್ತುಂಗಾ! ಕತ್ತಲಾಗುವ ಮುನ್ನ ಹೊರಡುವುದು ಒಳ್ಳೆಯದು. ನಾನು ಹೇಳಿದ ವಿಷಯ ನೆನಪಿಡು. ನಿನ್ನ ಬರುವಿಕೆಗಾಗಿ ನಾವು ಎದುರು ನೋಡುತ್ತಿರುತ್ತೇವೆ" ಎಂದು ಕೈ ಎತ್ತಿ ಬೀಳ್ಕೊಟ್ಟನು.

ಉತ್ತುಂಗನು ಆತನಿಗೆ ನಮಸ್ಕರಿಸಿ ದೋಣಿಯತ್ತ ನಡೆದನು. ಅಷ್ಟರಲ್ಲಿ ನಾಗಸಿಂಹನು ದೋಣಿಯಲ್ಲಿ ಕುಳಿತಿದ್ದನು. ಸೈನಿಕರು ದೋಣಿಯನ್ನು ನೀರಿಗೆ ತಳ್ಳಿದರು. ಉತ್ತುಂಗನು ಅದರಲ್ಲಿ ಹತ್ತಿ ಕುಳಿತು ಹುಟ್ಟು ಕೈಗೆ ತೆಗೆದುಕೊಂಡನು. ಆ ದೋಣಿಯ ಹಿಂದೆ ಸೈನಿಕರು ಇರುವ ಎರಡು ದೋಣಿಗಳು ಹೊರಟವು.

ಆಳೆತ್ತರದ ಒಂದು ಅಲೆ ಬಂದು ಮೂರು ದೋಣಿಗಳನ್ನೂ ಎಳೆದುಕೊಂಡು ಹೋಯಿತು. ಆಗ ತಾನೇ ಸೂರ್ಯಾಸ್ತಮಾನ ಆಗುತ್ತಿತ್ತು. ಅರ್ಧರಾತ್ರಿ ಸಮಯಕ್ಕೆ ಸಮುದ್ರ ಮಧ್ಯಕ್ಕೆ ಸೇರಬೇಕೆಂಬ ಉತ್ಸಾಹದಲ್ಲಿ ಉತ್ತುಂಗನು ದೋಣಿಯನ್ನು ನಡೆಸಲು ಆರಂಭಿಸಿದನು. ಹಿಂದೆ ಬರುತ್ತಿದ್ದ ಸೈನಿಕರಿರುವ ಎರಡು ದೋಣಿಗಳು ಸ್ವಲ್ಪ ದೂರದಲ್ಲಿ ಅವರನ್ನು ಅನುಸರಿಸಿ ಬರತೊಡಗಿತು.

"ಈ ಹೂಗಳನ್ನು ತೆಗೆದುಕೊಂಡು ಹೋಗಿ, ರಾಕ್ಷಸೀಮೃಗ ಇರುವ ಸ್ಥಳದಲ್ಲಿ ಸೇರಿಸುವುದರಿಂದ ಮಾತ್ರ ಅದು ಮಾಣಿಕ್ಯಪುರಿಗೆ ಬರುವುದಿಲ್ಲ

ಎಂದು ನಿನಗೆ ಹೇಗೆ ಗೊತ್ತು?'' ಎಂಬ ಮಾತುಗಳು ಕಠಿಣ ಧ್ವನಿಯಲ್ಲಿ ಕೇಳಿದಾಗ ಉತ್ತುಂಗನು ತಲೆ ಎತ್ತಿ ನೋಡಿದನು. ನಾಗಸಿಂಹನು ಕೋಪವಾಗಿ ನೋಡುತ್ತಿದ್ದನು. ಅವನ ಕಣ್ಣುಗಳು ಕೆಂಡಗಳಂತೆ ಉರಿಯುತ್ತಿದ್ದುವು. ಮುಖದಲ್ಲಿ ದ್ವೇಷ, ಸೇಡು ತುಂಬಿದ್ದುವು.

"ಈ ಹೂವುಗಳಿಂದ ಆಕರ್ಷಿಸಲ್ಪಟ್ಟ ರಾಕ್ಷಸೀ ಮೃಗ ಮಾಣಿಕ್ಯಪುರಿಗೆ ಬಂತು. ಈಗ ಮಾಣಿಕ್ಯ ಪುರಿಯಲ್ಲಿ ಒಂದು ಶತಾಬ್ಧಿಕ ಪುಷ್ಪವು ಸಹಾ ಇಲ್ಲದಂತೆ ಮಾಡಿದ್ದೇವೆ. ಎಲ್ಲವನ್ನೂ ಕಟ್ಟಾಗಿ ಕಟ್ಟಿ ತೆಗೆದುಕೊಂಡು ಬಂದಿದ್ದೇನೆ. ಇನ್ನು ಒಂದು ನೂರು ವರ್ಷಗಳವರೆಗೆ ಆ ಹೂವುಗಳು ಅರಳುವ ಅವಕಾಶ ಇಲ್ಲ. ಅದರಿಂದ ರಾಕ್ಷಸೀಮೃಗ ಅದು ವರೆಗೂ ಮಾಣಿಕ್ಯಪುರಿಗೆ ಬರುವ ಅಪಾಯ ಇಲ್ಲವೆಂದು ಹಿರಿಯರು ಹೇಳಿದರು'' ಎಂದನು ಉತ್ತುಂಗನು.

"ಅಂದರೆ ಈ ಹೂವುಗಳನ್ನು ತೋರಿಸಿ ರಾಕ್ಷಸೀ ಮೃಗದೊಂದಿಗೆ ವ್ಯಾಪಾರ ಕುದುರಿಸಿಕೊಳ್ಳಬಹುದು. ಅಲ್ಲವೇ?'' ಎಂದನು ನಾಗಸಿಂಹ.

"ರಾಕ್ಷಸೀಮೃಗದೊಂದಿಗೆ ವ್ಯಾಪಾರವೇ? ನೀನು ಏನು ಹೇಳುತ್ತಿರುವೆ? ಅದನ್ನು ಸಮೀಪಿಸಿ ಮಾತ ನಾಡಲು ಹೇಗೆ ಸಾಧ್ಯ? ಅದಕ್ಕೆ ನಮ್ಮ ಭಾಷೆ ಅರ್ಥವಾಗುವುದೇ? ನಾನು ನನ್ನ ದೇಶದ ರಕ್ಷಣೆಗಾಗಿ ರಾಕ್ಷಸೀಮೃಗವನ್ನು ಹುಡುಕುತ್ತಾ ಹೊರಟಿದ್ದೇನೆಯೇ ವಿನಹಾ ಅದರೊಂದಿಗೆ ವ್ಯಾಪಾರ ಮಾಡಲು ಅಲ್ಲ. ನನ್ನ ಸಹಾಯಕ್ಕಾಗಿ ಬರುತ್ತಿರುವ ನಿನಗೆ ಇಂಥಾ ಯೋಚನೆ ಬರುವುದು ಉಚಿತವಲ್ಲ. ಇಷ್ಟರ ಮೇಲೆ ನಿನಗೆ ರಾಕ್ಷಸೀ ಮೃಗದೊಂದಿಗೆ ಏನು ಕೆಲಸ?'' ಎಂದು ಕೇಳಿದನು ಉತ್ತುಂಗನು ಆಶ್ಚರ್ಯದಿಂದ.



"ತುಂಬ ಮುಖ್ಯವಾದ ಕೆಲಸವೇ ಇದೆ. ರಾಜ ಭವನವನ್ನು ಅಲ್ಲಿರುವ ರಾಣಿ, ಯುವರಾಣಿ ಮತ್ತು ರಾಜನನ್ನು ನೆಲಸಮ ಮಾಡಬೇಕು. ಅದಕ್ಕೆ ನನಗೆ ರಾಕ್ಷಸೀ ಮೃಗದ ಸಹಾಯ ಬೇಕು'' ಎಂದನು ನಾಗಸಿಂಹ.

ಅವನ ಭೀಕರ ರೂಪು ನೋಡಿ, ಅವನ ಭಯಂಕರ ಮಾತು ಕೇಳಿ ಉತ್ತುಂಗನ ಎದೆ ಕಂಪಿಸಿತು. 'ಇವನು ಎಂಥಾ ರಾಜದ್ರೋಹಿ! ಒಡ ಹುಟ್ಟಿದವಳ ರಕ್ತದ ರುಚಿ ನೋಡಲು ಕಾದು ನಿಂತಿರುವ ನರರೂಪದ ರಾಕ್ಷಸನಿವನು!' ಎಂದು ಅರಿವಾದ ಉತ್ತುಂಗನಿಗೆ ಮತ್ತೊಂದು ಭಯಂಕರ ಮೃಗದೊಂದಿಗೆ ಮಾತಾಡುತ್ತಿರುವಂತೆ ಭಾಸ ವಾಯಿತು. ನಿಜವಾದ ರಾಕ್ಷಸೀಮೃಗ ಹೂಗಳಿಗಾಗಿ ಭೀಭತ್ಸವನ್ನು ಸೃಷ್ಟಿಸಿದರೆ, ನಾಗಸಿಂಹನು ಸ್ವಾರ್ಥ ದಿಂದ ಕ್ರೂರ ರಾಕ್ಷಸೀ ಮೃಗದಂತೆ ತನ್ನವರನ್ನೇ

ಕೊಲ್ಲಲು ಕಾದು ನಿಂತಿದ್ದಾನೆ.

"ಒಳ್ಳೆಯವರು, ನಿನ್ನ ಬಂಧುಗಳೂ ಆಗಿರುವ ಅವರನ್ನು ಏಕೆ ನಾಶ ಮಾಡಬೇಕು?'' ಎಂದು ಕೇಳಿದನು ಉತ್ತುಂಗ.

"ನಾನು ನಾಗಪುರಿಯ ರಾಜನಾಗಬೇಕು. ಅದಕ್ಕೆ ಅಡ್ಡಿಯಾಗಿ ಬರುವವರು ಯಾರೇ ಆಗಿರಲಿ ಕೊಲ್ಲುತ್ತೇನೆ. ನನ್ನ ಒಡಹುಟ್ಟಿದವರು, ಬಂಧುಗಳು, ಆಪ್ತರು ಎಂದು ದಯಾದಾಕ್ಷಿಣ್ಯಗಳು ನೋಡುವುದಿಲ್ಲ. ಕಡೆಗೆ ನೀನು ಅಡ್ಡ ಬಂದರೂ ಸರಿ ನಿನ್ನನ್ನೂ ಕೊಲ್ಲುತ್ತೇನೆ'' ಎಂದನು ನಾಗಸಿಂಹ ಬಿಗಿದ ಮುಷ್ಟಿ ತೋರಿಸುತ್ತಾ.

"ನನ್ನನ್ನು ಕೊಲ್ಲುವೆಯಾ? ಮಾಣಿಕ್ಯಪುರಿಯಿಂದ ತಂದ ಹೂಗಳು ನಿನಗೆ ಉಪಯೋಗವಾಗಲು ನಾನು ಅನುಮತಿಸುವುದಿಲ್ಲ. ಅದರ ಮೂಲಕ ರಾಜಕುಟುಂಬಕ್ಕೆ ಹಾನಿ ಉಂಟಾಗಲು ಒಪ್ಪುವುದಿಲ್ಲ'' ಎಂದನು ಉತ್ತುಂಗ ದೃಢವಾದ ಕಂಠಧ್ವನಿಯಿಂದ.

"ನೀನು ಪ್ರಾಣದೊಂದಿಗೆ ಇದ್ದರೆ ಅಲ್ಲವೇ ಒಪ್ಪದೇ ಇರುವುದಕ್ಕೆ'' ಎಂದು ನಾಗಸಿಂಹನು ಎದ್ದು, ಉತ್ತುಂಗನನ್ನು ಹುಗೋಲಿನಿಂದ ನೀರಿಗೆ ತಳ್ಳಿದನು. ಉತ್ತುಂಗನು ಅಂಗಾತನಾಗಿ ಬಿದ್ದು ಹೋದನು. ಆಮೇಲೆ ಅವನ ಸುಳಿವು ತಿಳಿಯಲಿಲ್ಲ. ನಾಗಸಿಂಹನು ಸ್ವಲ್ಪ ಸಮಯ ಸುತ್ತಮುತ್ತ ದೃಷ್ಟಿಸಿ ನೋಡಿ, ತನ್ನ ದೋಣಿಯನ್ನು ಸೈನಿಕರು ಬರುತ್ತಿರುವ ದೋಣಿಗಳ ಕಡೆ ನಡೆಸಿ, ತನ್ನ ದೋಣಿಯಲ್ಲಿ ಇರುವ ಶತಾಬ್ಧಿಕ ಪುಷ್ಪಗಳನ್ನು ಆ ದೋಣಿಗೆ ಬದಲಾಯಿಸಿ ತಾನು ಅವರೊಂದಿಗೆ ಅದರಲ್ಲಿ ಹೋದನು.

ಸಮುದ್ರದಲ್ಲಿ ಬಿದ್ದ ಉತ್ತುಂಗನು ನಿಧಾನವಾಗಿ ಈಜುತ್ತಾ ಸ್ವಲ್ಪ ಸಮಯದ ನಂತರ ತಲೆ ಎತ್ತಿ ನೋಡಿದನು. ಕತ್ತಲು ಆವರಿಸುತ್ತಿತ್ತು. ಇದ್ದಕ್ಕಿದ್ದಂತೆ ಅವನ ಕೈಗೆ ಏನೋ ತಗಲಿತು. ಅವನು ಅದನ್ನು ಪರಿಶೀಲಿಸಿ ನೋಡಿದನು. ಅದು ಒಂದು ಖಾಲಿ ದೋಣಿ. ಅವನು ಅತಿ ಪ್ರಯತ್ನದಿಂದ ಆ ದೋಣಿಯಲ್ಲಿ ಹತ್ತಿ ಕುಳಿತನು. ಅದೃಷ್ಟವಶಾತ್ತು ಅದರಲ್ಲಿ ಎರಡು ಹುಟ್ಟುಗಳು ಇದ್ದವು. ಒಂದು ಕಡೆ ಅವನಿಗೆ ದೂರದಲ್ಲಿ ಎತ್ತರವಾದ ಬಂಡೆಗಳು ಕಾಣಿಸಿದುವು. ಶತಾಬ್ಧಿಕ ಪುಷ್ಪಗಳು ಇಲ್ಲದೆ ರಾಕ್ಷಸೀ ಮೃಗವನ್ನು ಎದುರಿಸುವುದು ಪ್ರಯೋಜನ ಇಲ್ಲವೆಂದು ದೋಣಿಯನ್ನು ಬಂಡೆಗಳು ಕಾಣುತ್ತಿರುವ ತೀರಕ್ಕೆ ನಡೆಸಿದನು.

(ಇನ್ನೂ ಇದೆ)





# ವಿಚಿತ್ರ ಪುಷ್ಪ

## ೧೨

[ರಾಕಸೀ ಮೃಗಕ್ಕಾಗಿ ಹೊರಟ ಉತ್ತುಂಗನೊಡನೆ ಆತನಿಗೆ ಸಹಾಯವಾಗಿರಲು ಹೊರಟ ದಳನಾಯಕ ನಾಗಸಿಂಹನು, ಉತ್ತುಂಗನನ್ನು ಸಮುದ್ರದಲ್ಲಿ ತಳ್ಳಿಬಿಟ್ಟನು. ಉತ್ತುಂಗನು ನಾಗಪುರಿಗೆ ಬಂದು ರಾಜನಿಗೆ ಸಂಗತಿ ತಿಳಿಸಿದನು. ರಾಜನು ಸೈನ್ಯಾಧಿಪತಿಯನ್ನು, ಸೈನಿಕರನ್ನು ಕರೆದುಕೊಂಡು ಸಮುದ್ರ ತೀರಕ್ಕೆ ಹೊರಟನು. ಸಮುದ್ರದಲ್ಲಿ ರಾಕ್ಷಸೀ ಮೃಗ ದೋಣಿಗಳನ್ನು ಅಟ್ಟಿಸಿಕೊಂಡು ಬರುತ್ತಿರುವುದು ಕಂಡಿತು. ಉತ್ತುಂಗನ ಆಜ್ಞೆಯಂತೆ ಸೈನಿಕರು ರಾಕ್ಷಸೀ ಮೃಗದ ಮೇಲೆ ದೀವಟಿಗಳನ್ನು ಬಾಣಗಳಂತೆ ಮಾಡಿ ಬೀಸಿದರು. ರಾಕ್ಷಸೀ ಮೃಗ ಭಗ್ಗನೆ ಉರಿದು ನೀರಿನಲ್ಲಿ ಮುಳುಗಿತು. ರಾಜನು ನಾಗಪುರಿಗೆ ಮರಳಿದನು]

ಉತ್ತುಂಗನು ಮೂವರು ಭಟರು ಬಂಡೆಯ ಮೇಲಿಂದ ಕೆಳಗೆ ಇಳಿದು ಬಂದು, ಮತ್ತೆ ಕೆಲವು ಸೈನಿಕರೊಂದಿಗೆ ಸೇರಿ ಸಮುದ್ರ ಮಾರ್ಗ ದ್ವಾರದ ಒಳಗೆ ಹೋದರು. ಕೈಯಲ್ಲಿ ದೀವಟಿಗೆಗಳು ಹಿಡಿದು ಅವರು ಬಹಳ ಸಮಯ ಅಲ್ಲಿ ನಿಂತರು. ಆದರೆ ಸಮುದ್ರದಿಂದ ಯಾರೂ ಬರಲಿಲ್ಲ. ಮೂಡಲ ದಿಕ್ಕಿನಲ್ಲಿ ಬೆಳಕು ಕಾಣುತ್ತಿರುವಾಗ, ಯಾರೋ ಸಮುದ್ರದಿಂದ ಅತಿ ಕಷ್ಟದಿಂದ ಮೇಲೆ ಬರುವುದು ಕಾಣಿಸಿತು. ಉತ್ತುಂಗನು ಒಮ್ಮೆಲೇ ಹಾರಿ ಹೋಗಿ ಅವನಿಗೆ ಕೈ ನೀಡಿ, ನೀರಿನಿಂದ ಹೊರಗೆ ಎಳೆದು, ಅವನಿಗೆ ಆಧಾರವಾಗಿರಲು ಸೊಂಟದ ಸುತ್ತಲು ಕೈ ಹಾಕಿ, ಕರೆ ತಂದು ಒಂದು ಕಡೆ ಕುಳ್ಳಿರಿಸಿದನು. ಆ ಭಟನು ಬಹಳ ದಣಿದು ಜ್ಞಾನ ತಪ್ಪುವ ಸ್ಥಿತಿಯಲ್ಲಿದ್ದನು. ಅವನ ದೇಹದಲ್ಲಿ ಕಾವು ಬರಲು ಉತ್ತುಂಗನು ಅವನ ಅಂಗೈಗಳನ್ನು, ಕಾಲುಗಳನ್ನು ಉಜ್ಜಲು ಆರಂಭಿಸಿನು. ತುಸು ಸಮಯದ ನಂತರ ಭಟನು ಕಣ್ಣು ತೆರೆದು "ರಾಕ್ಷಸೀ ಮೃಗ ಬಂದಿತೇ" ಎಂದು ಹೆದರಿ, ಹೆದರಿ, ನೋಡುತ್ತಾ ಕೇಳಿದನು.



ಉತ್ತುಂಗನು ತಲೆಯನ್ನು ಅಡ್ಡವಾಗಿ ಆಡಿಸಲು "ಹೌದು ಇಲ್ಲಿಗೆ ಹೇಗೆ ಬರುತ್ತದೆ? ಸಮುದ್ರದಲ್ಲೇ ಉರಿದು ಹೋಯಿತಲ್ಲವೇ? ದಳನಾಯಕನು ಸತ್ತು ಹೋದ. ರಾಕ್ಷಸೀ ಮೃಗವನ್ನು ತೀರಕ್ಕೆ ಸೇರಿಸದಿದ್ದರೆ ಸಾವು ತಪ್ಪುವುದಿಲ್ಲ ಎಂದು ಆ ದುರ್ಮಾರ್ಗನು ಬೆದರಿಸುತ್ತಾ ಬಂದನು. ಕಡೆಗೆ ಅವನೇ ಸತ್ತನು. ತಾನು ರಾಜನಾದರೇ ನಮಗೆ ಒಳ್ಳೆ ಕಾಣಿಕೆಗಳು, ಪದವಿಗಳು ಕೊಡುತ್ತೇನೆಂದು ಆಶೆ ತೋರಿಸಿದನು. ಆದರೆ ಹಠಾತ್ತನೆ ರಾಕ್ಷಸೀ ಮೃಗ ಸಮುದ್ರದಿಂದ ಬರಲು ನಾವು ನಡುಗಿ ಹೋದೆವು. ದಳನಾಯಕನು ಒಂದು ಹೂವಿನ ಕಟ್ಟನ್ನು ತೆಗೆದು ಅದರ ಮುಂದೆ ಬಿಸಾಕಿದನು. ಆದರೆ ಆ ರಾಕ್ಷಸೀ ಮೃಗ ಬ್ರಹ್ಮಾಂಡವಾದ ತನ್ನ ಕೈಗಳಿಂದ ದೋಣಿಗಳನ್ನು ಹಿಡಿಯಲು ಪ್ರಯತ್ನಿಸಿತು. ಅದೇ ಸಮಯಕ್ಕೆ ಸರಿಯಾಗಿ ಉರಿಯುತ್ತಿದ್ದ ದೀವಟಿಗಳು ಅದರ ಮೋರೆಕ್ಕೆ ತಾಕಿದ್ದರಿಂದ ಅದು ನೀರಿನಲ್ಲಿ ಮುಳುಗಿತು. ಸ್ವಲ್ಪ ಸಮಯಕ್ಕೆ ಅದು ನಮ್ಮ ದೋಣಿಗಳ ಕೆಳಗಿಂದ ಎದ್ದು ದೋಣಿಗಳನ್ನು ತಲೆ ಕೆಳಗಾಗಿ ಮಾಡಿ, ಹೂಗಳನ್ನು ಅರಿಸತೊಡಗಿತು. ಅದೇ ತೀರದಿಂದ ಬಂದ ದೀವಟಿಗಳು ಅದರ ತಲೆಯನ್ನು ಮೋರೆಯನ್ನು ಮತ್ತೆ ತಾಕಿದ್ದರಿಂದ ಭಗ್ಗನೆ ಉರಿದು ನೀರಿನಲ್ಲಿ ಮುಳುಗಿ ಹೋಯಿತು. ದಿಕ್ಕಾಪಾಲಾಗಿ ಬಿದ್ದು ಹೋದ ಮಿಕ್ಕ ಭಟರು ಏನಾದರೋ ತಿಳಿಯದು. ನಾನು ಹೇಗೆಯೋ ಈಜುತ್ತಾ ತೀರಕ್ಕೆ ಬಂದೆ" ಎಂದನು.

"ದಳನಾಯಕನು ದೋಣಿಯಿಂದ ನನ್ನನ್ನು ತಳ್ಳಿಬಿಟ್ಟನು. ಆಮೇಲೆ ಏನು ನಡೆಯಿತು ಎಂದು ನೀನು ಬಂದ ಮೇಲೆ ತಿಳಿಯಿತು" ಎಂದನು ಉತ್ತುಂಗನು.

"ನಿನ್ನನ್ನು ನೀರಿನಲ್ಲಿ ತಳ್ಳಿದ ದಳನಾಯಕನು ನಮ್ಮ ಬಳಿ ಬಂದು ರಾಕ್ಷಸೀ ಮೃಗವನ್ನು ತನಗೆ ಅನುಕೂಲವಾಗಿ ಮಾಡಿಕೊಂಡು, ತಾನೇ ನಾಗಪುರಿಗೆ ರಾಜನಾಗುತ್ತೇನೆಂದು ನಮಗೆ ಹೇಳಿದನು. ಆ ದುರಾಸೆಯೇ ಅವನ ಪ್ರಾಣ ಹೀರಿತು" ಎಂದನು ಆ ಭಟನು.

"ಸರಿ! ನಾವು ಈಗ ಸೇನಾಧಿಪತಿ ಹತ್ತಿರ ಹೋಗಿ ನಡೆದ ವಿಷಯ ತಿಳಿಸೋಣ" ಎಂದನು ಉತ್ತುಂಗನು.

"ಆಗಲಿ ನಾನು ನಿನ್ನೊಂದಿಗೆ ಬರುತ್ತೇನೆ" ಎಂದು ಎದ್ದು ನಿಂತನು ಭಟನು.

ಆಗಲೇ ಸೂರ್ಯೋದಯವಾಗುತ್ತಿತ್ತು. ಆಗ ಸಮುದ್ರ ಜಲ ತೀರದಲ್ಲಿ ಯಾವುದೋ ಶವ ಕಾಣಿಸಿತು. ಅವರು ಹತ್ತಿರ ಹೋಗಿ ನೋಡಿದರು. ಮೈ, ಮುಖ ಸುಟ್ಟು ವಿಕಾರವಾಗಿದ್ದ ಮಾನವ ಶವ ಅದು. ಅದನ್ನು ಪರಿಶೀಲಿಸಿ ನೋಡಿದ ಉತ್ತುಂಗನು

“ಇದು ರಾಕ್ಷಸೀ ಮೃಗದ ಮೃತ ದೇಹ ಆಗಿರಬೇಕು ಇಲ್ಲಿ ಇಬ್ಬರು ಭಟರು ಕಾವಲಿರಿ. ನಾನು ರಾಜಧಾನಿಗೆ ಹೋಗಿ ಈ ವಿಷಯ ಹೇಳುತ್ತೇನೆ'' ಎಂದು ಅಲ್ಲಿಂದ ಹೊರಟನು.

ಅವನು ರಾಜಧಾನಿಯಲ್ಲಿ ಸೇನಾಧಿಪತಿ ಮನೆಗೆ ಹೋದಾಗ, ಸೇನಾಧಿಪತಿಯೊಂದಿಗೆ ಕಾಬೂಯಿ ಸಹ ಅಲ್ಲಿ ಇದ್ದನು. ಅವನನ್ನು ನೋಡುತ್ತಲೇ “ಭಟರು ಪ್ರಾಣದೊಂದಿಗೆ ತೀರ ಸೇರಿದರೇ? ದಳ ನಾಯಕನು ಏನಾದನು'' ಎಂದು ಕೇಳಿದನು ಸೇನಾಧಿಪತಿ.

“ದಳನಾಯಕನು ಬರಲಿಲ್ಲ ಪ್ರಭೂ! ನಡೆದ ವಿಷಯಗಳನ್ನು ನೀವೇ ಕೇಳಿ'' ಎಂದು ಭಟನನ್ನು ತೋರಿಸಿದನು ಉತ್ತುಂಗನು.

ಭಟನ ಮೂಲಕ ನಡೆದಿದ್ದನ್ನು ಕೇಳಿದ ಸೇನಾಧಿಪತಿ “ದಳನಾಯಕ ನಾಗಸಿಂಹನು ಜಲಸಮಾಧಿ ಆಗಿರುವುದರಲ್ಲಿ ಸಂದೇಹವಿಲ್ಲ. ಆದರೂ ಅವನ ಸಾವಿನ ಸುದ್ದಿ ರಾಜಗೆ ಸಂತಸ ನೀಡುತ್ತದೆ ಎಂದು ಹೇಳಲಾರೆವು. ಎಷ್ಟಾಗಲಿ ಅವನು ರಾಜ ಬಂಧುವಲ್ಲವೆ?'' ಎಂದನು. ಅಲ್ಲಿಂದ ಎಲ್ಲರೂ ರಾಜನ ಬಳಿ ಹೊರಟರು.

ಉತ್ತುಂಗ ಹಾಗೂ ಭಟನು ಹೇಳಿದ ವಿಷಯಗಳನ್ನು ಸೇನಾಧಿಪತಿ ರಾಜನಿಗೆ ತಿಳಿಸಿದನು. ರಾಜನು ಎಲ್ಲವನ್ನು ಕೇಳಿ, ತಲೆ ಎತ್ತಿ ಉತ್ತುಂಗನನ್ನು ನೋಡಿ “ನೀನು ಮಾಣಿಕ್ಯಪುರಿಯನ್ನು ಮಾತ್ರವಲ್ಲ, ನಮ್ಮ ರಾಜ್ಯವನ್ನು ಸಹಾ ಆಪತ್ತಿನಿಂದ ರಕ್ಷಿಸಿದೆ. ನಿನ್ನ ಸಾಹಸ ಮೆಚ್ಚಲೇಬೇಕು. ಪ್ರಾಣವನ್ನು ತೃಣವಾಗಿ ಭಾವಿಸಿ, ಮಾತೃ ದೇಶವನ್ನು ಉಳಿಸಿದ ನೀನು ಮಹಾ ವೀರನು ಮಾತ್ರವಲ್ಲ, ಮಹಾ ಪುರುಷನೆಂದೇ ಹೇಳಬೇಕು. ತಾಯಿಯನ್ನು, ತಾಯಿನಾಡನ್ನು, ಕರ್ತವ್ಯವನ್ನು ತಮ್ಮ ಭಾಗದ ದೇವರೆಂದು ತಿಳಿದು



ಯಾರು ತಮ್ಮ ಪವಿತ್ರ ಹೊಣೆಯನ್ನು ನಿರ್ವಹಿಸುವರೋ ಅವರು ಧನ್ಯರು. ಉತ್ತುಂಗಾ! ನೀನು ಧನ್ಯನು. ನಿನ್ನ ಧೈರ್ಯ ಯುವಕರಿಗೆಲ್ಲಾ ಆದರ್ಶ ವಾಗುತ್ತೆ. ನೀನು ಸಮ್ಮತಿಸಿದರೆ ನಮ್ಮ ಸೈನ್ಯದಲ್ಲೇ ದಳನಾಯಕನ ಪದವಿ ಕೊಡುತ್ತೇನೆ. ಸೇರುವೆಯಾ'' ಎಂದು ಕೇಳಿದನು.

ಅಷ್ಟರಲ್ಲಿ ಸೇನಾಧಿಪತಿ “ಉತ್ತಮ ಯೋಚನೆ ಪ್ರಭೂ! ಉತ್ತುಂಗನು ಸೈನ್ಯದಲ್ಲಿ ಸೇರಿದರೆ, ಇಷ್ಟು ಕಾಲ ಸೈನ್ಯದಲ್ಲಿ ಸೇರಲು ವಿಮುಖರಾಗಿದ್ದ ಬೆಟ್ಟದ ಜಾತಿ ಯುವಕರು ಸೇರುವ ಅವಕಾಶ ಇದೆ'' ಎಂದನು ಉತ್ಸಾಹದಿಂದ.

“ಉತ್ತುಂಗನು ದಳನಾಯಕನಾದರೆ ನಮ್ಮೆಲ್ಲರಿಗೂ ಸಹ ನಾಯಕನಾಗುತ್ತಾನೆ' ಎಂದನು ಕಾಬೂಯಿ ಆನಂದದಿಂದ.

ಉತ್ತುಂಗನು ಸ್ವಲ್ಪ ಸಮಯ ಮೌನವಾಗಿದ್ದು



"ನೀವು ನನ್ನ ಮೇಲೆ ತೋರುತ್ತಿರುವ ಅಭಿಮಾನಕ್ಕೆ ನಾನು ಚಿರಋಣಿ. ನಾನು ಮಾಣಿಕ್ಯಪುರಿಯಿಂದ ಏಕೆ ಹೊರಟು ಬಂದನೆಂದು ನಿಮ್ಮೆಲ್ಲರಿಗೂ ತಿಳಿದೇ ಇದೆ. ನನ್ನ ತಾಯಿನಾಡಿನಲ್ಲಿ ನನ್ನ ಜನರು ರಾಕ್ಷಸೀ ಮೃಗದ ಬಗ್ಗೆ ಹೆದರಿ ನಡುಗುತ್ತಿದ್ದಾರೆ. ಹೆಂಗಸರು ಮಕ್ಕಳು ಕಂಗಾಲಾಗಿ ನಿಂತಿದ್ದಾರೆ. ಅವರೆಲ್ಲರ ರಕ್ಷಣೆಯ ಭಾರವನ್ನು ಹೊತ್ತಿರುವ ಅರಸರು, ಯುವರಾಣಿ, ಸೇನಾಧಿಪತಿ ರಾಕ್ಷಸೀ ಮೃಗದ ಮರಣದ ವಾರ್ತೆಯನ್ನು ಕೇಳಲು ಕಾತರದಿಂದ ಎದುರು ನೋಡುತ್ತಿರುತ್ತಾರೆ. ನನ್ನ ಬರುವಿಕೆಗಾಗಿ, ನನ್ನವರು ಕಾದಿರುತ್ತಾರೆ. ನಾನು ಬೇಗ ಹೋಗಿ ಸೇರಲು ಅನುಮತಿ ನೀಡಿ. ನಿಮ್ಮ ಅಭಿಮಾನವನ್ನು ಕರುಣೆಯನ್ನು ಎಂದಿಗೂ ಮರೆಯುವುದಿಲ್ಲ ಮಹಾರಾಜಾ'' ಎಂದನು ವಿನಯದಿಂದ.

ರಾಜನು ಉತ್ತುಂಗನ ಕೈ ಹಿಡಿದು. "ಸಭಾಷ್! ನಿನ್ನ ಮಾತೃದೇಶಾಭಿಮಾನವನ್ನು ಮೆಚ್ಚುತ್ತೇನೆ. ನಿನ್ನ ಇಷ್ಟದಂತೆಯೇ ಹೊರಡು. ಆದರೆ ಈ ದಿನ ಬೇಡ. ಸಕಲ ಮರ್ಯಾದೆಗಳೊಂದಿಗೆ ನಾಳೆ ನಿನ್ನನ್ನು ಕಳುಹಿಸಿ ಕೊಡುತ್ತೇನೆ'' ಎಂದನು ರಾಜ.

ಉತ್ತುಂಗನು ಸರಿ ಎಂದು ಒಪ್ಪಿದನು. ಕಾಬೂಯಿ "ತಾವು ಅನುಮತಿ ನೀಡಿದರೆ ಉತ್ತುಂಗನನ್ನು ನಾನು ನಮ್ಮ ಪಟ್ಟಿಗೆ ಕರೆದುಕೊಂಡು ಹೋಗಿ ನಮ್ಮವರಿಗೆ ತೋರಿಸಿಕೊಂಡು ಬರುತ್ತೇನೆ'' ಎಂದನು.

"ಆಗಲಿ, ಕಾಬೂಯಿ! ನಾಳೆ ಇದೇ ಸಮಯಕ್ಕೆ ನೀವು ಇಬ್ಬರೂ ಇಲ್ಲಿರಬೇಕು'' ಎಂದನು.

"ಅಪ್ಪಣೆ ಮಹಾರಾಜಾ'' ಎಂದು ಹೇಳಿ ಕಾಬೂಯಿ ಉತ್ತುಂಗನನ್ನು ಕರೆದುಕೊಂಡು ಅಲ್ಲಿಂದ ಹೊರಟು ತನ್ನ ಪಟ್ಟಿಗೆ ಸೇರಿದನು.

ಅವರನ್ನು ನೋಡಲು ಕಾದಿದ್ದ ಸ್ತ್ರೀ, ಪುರುಷರು ಸಂತೋಷದಿಂದ ಚಪ್ಪಾಳೆ ತಟ್ಟುತ್ತಾ ನೃತ್ಯ ಮಾಡಿದರು. ಕಾಬೂಯಿ, ಉತ್ತುಂಗನ ಪ್ರಯಾಣದ ಬಗ್ಗೆ ಅವರಿಗೆ ಹೇಳಿ ಅವನನ್ನು ಮನೆಗೆ ಕರೆದುಕೊಂಡು ಹೋದನು. ಕಾಬೂಯಿಯ ಹೆಂಡತಿ ಅವರಿಗೆ ಔತಣದ ಊಟ ಬಡಿಸಿದಳು.

ಉತ್ತುಂಗನು ಆ ರಾತ್ರಿ ಅಲ್ಲೇ ಮಲಗಿ ಚೆನ್ನಾಗಿ ನಿದ್ದೆ ಮಾಡಿದನು. ಮರುದಿನ ಬೆಳಿಗ್ಗೆ ಎದ್ದಾಗ, ಅವನಿಗೆ ಚಿತ್ರ ಗಿಡಕ್ಕೆ ನೀರು ಹಾಕುತ್ತಿರುವುದು ಕಾಣಿಸಿತು. ಆ ಗಿಡ ತಾನು ಕೊಟ್ಟಿದ್ದೆ ಎಂದು ಗ್ರಹಿಸಿದ ಉತ್ತುಂಗನು ಮೆಲ್ಲನೆ ನಗುತ್ತಾ ಅವಳನ್ನು ಸಮೀಪಿಸಿದನು.

ಚಿತ್ರ ತಲೆ ಎತ್ತಿ "ನೀನು ಮಾಣಿಕ್ಯಪುರಿಗೆ ಹೋಗಲೇಬೇಕೆ?'' ಎಂದಳು.

"ಹೌದು. ನನಗಾಗಿ ನನ್ನವರೆಲ್ಲಾ ಕಾದಿರುತ್ತಾರೆ'' ಎಂದನು ಉತ್ತುಂಗ. ತನ್ನ ಮಾತುಗಳು ಅವಳಿಗೆ



ಎಷ್ಟರ ಮಟ್ಟಿಗೆ ಅರ್ಥವಾಯಿತೋ ತಿಳಿಯದೆ.

"ಇಲ್ಲಿಗೆ ತಿರುಗಿ ಬಂದು ನಮ್ಮ ಸೈನ್ಯದಲ್ಲಿ ದಳನಾಯಕನಾಗಬಹುದಲ್ಲಾ'' ಎಂದು ಕೇಳಿದಳು ಚಿತ್ರ.

ಉತ್ತುಂಗನಿಗೆ "ದಳನಾಯಕ'' ಎಂಬ ಮಾತು ಅರ್ಥವಾಯಿತು. ಅವಳ ಪ್ರಶ್ನೆ ಏನಾಗಿರಬಹುದೆಂದು ಊಹಿಸಿದ ಅವನು ತಲೆ ಅಡ್ಡವಾಗಿ ಆಡಿಸಿದ.

ಚಿತ್ರ ಕಣ್ಣೀರನ್ನು ಒರೆಸಿಕೊಳ್ಳುತ್ತಾ ಮನೆಯ ಒಳಗೆ ನಡೆದಳು. ಆ ಮೇಲೆ ಉತ್ತುಂಗನು ಎಲ್ಲರಿಗೂ ಕೈ ಎತ್ತಿ ನಮಸ್ಕರಿಸಿ ಕಾಬೂಯಿಯ ಹಿಂದೆ ರಾಜಧಾನಿಗೆ ಹೊರಟನು.

ರಾಜಭವನದ ಬಳಿ ರಾಜನು, ಉತ್ತುಂಗನಿಗಾಗಿ ರಾಜ ಪರಿವಾರದೊಂದಿಗೆ ಕಾದಿದ್ದನು. ಉತ್ತುಂಗ, ಕಾಬೂಯಿ ರಾಜನಿಗೆ ನಮಸ್ಕರಿಸಿದರು. ರಾಜನು ಅವರನ್ನು ಆದರದಿಂದ ಆಹ್ವಾನಿಸಿ ಕುಳಿತುಕೊಳ್ಳಲು ಆಸನಗಳನ್ನು ತೋರಿಸಿದನು. ಅವರು ಕುಳಿತ ನಂತರ ಸೇನಾಧಿಪತಿ ಎದ್ದು ನಿಂತು, ಉತ್ತುಂಗನನ್ನು ಸಭೆಗೆ ಪರಿಚಯ ಮಾಡಿಸಿದನು. ಸಭಿಕರು ಉತ್ತುಂಗನನ್ನು ಆಶ್ಚರ್ಯದಿಂದ ನೋಡಿದರು. ಉತ್ತುಂಗನು ವಿನಯದಿಂದ ಎದ್ದು, ನಿಂತು ಸಭೆಗೆ ಗೌರವದಿಂದ ನಮಸ್ಕರಿಸಿದನು. ಸಭಿಕರ ಕರತಾಡನ ಧ್ವನಿ ಸಭಾ ಪ್ರಾಂಗಣದಲ್ಲಿ ಪ್ರತಿಧ್ವನಿಸಿತು.

ಆಮೇಲೆ ರಾಜನು ಎದ್ದು ಉತ್ತುಂಗನನ್ನು ಸಮೀಪಿಸಿ "ಉತ್ತುಂಗಾ! ನಿನ್ನ ಸಾಹಸ, ಮಾತೃ ದೇಶಭಕ್ತಿ ಅತ್ಯಂತ ಪ್ರಶಂಸನೀಯ. ನಿನ್ನನ್ನು ಮನಸಾರ ಅಭಿನಂದಿಸುತ್ತೇನೆ'' ಎಂದು ತನ್ನ ಕಂಠದಲ್ಲಿದ್ದ ಹಾರ ತೆಗೆದು ಅವನ ಕೊರಳಿಗೆ ಹಾಕಿ ಪ್ರೀತಿಯಿಂದ ಆಲಂಗಿಸಿಕೊಂಡನು.

ಉತ್ತುಂಗನು ರಾಜನಿಗೆ, ರಾಣಿಗೆ ನಮಸ್ಕರಿಸಿ ಯುವರಾಣಿ ಮಲ್ಲಿಕಳ ಬಳಿ ಬಂದು ನಿಲ್ಲಲು ಅವಳು "ರಾಕ್ಷಸೀ ಮೃಗದಿಂದ ನಮ್ಮ ರಾಜ್ಯವನ್ನು ಕಾಪಾಡಿದೆ. ಧನ್ಯವಾದಗಳು'' ಎಂದಳು.

ಉತ್ತುಂಗನು ಅವಳಿಗೆ ಕೈ ಜೋಡಿಸಿ ನಮಸ್ಕರಿಸಿ. ಸೇನಾಧಿಪತಿ ಬಳಿಗೆ ಬಂದನು.

"ರಾಕ್ಷಸೀ ಮೃಗದ ಮೃತ ದೇಹವನ್ನು ಸಮುದ್ರ ತೀರದಲ್ಲೇ ಮಣ್ಣು ಮಾಡಿದೆವು. ನಿನ್ನ ಜೊತೆಯಲ್ಲಿ ನಮ್ಮ ಸೈನಿಕರು ಎರಡು ದೋಣಿಗಳಲ್ಲಿ ಮಾಟೆಸ್ಕ್ಯು ಪುರಿಗೆ ಬರುತ್ತಾರೆ. ಅವರು ಆಗಲೇ ಸಮುದ್ರ ತೀರಕ್ಕೆ ಹೋದರು. ಅಲ್ಲಿ ನಿನಗಾಗಿ ಎದುರು ನೋಡುತ್ತಿರುತ್ತಾರೆ. ಕಾಬೂಯಿ ಸಮುದ್ರ ತೀರದ ವರೆಗೂ ಬಂದು ನಿನ್ನನ್ನು ಬೀಳ್ಕೊಡುತ್ತಾನೆ. ನೀನು ಈಗಲೇ ಹೊರಡಬಹುದು. ನಿಮ್ಮ ರಾಜನಿಗೆ ನಮ್ಮ ಶುಭಾಶಯಗಳನ್ನು ತಿಳಿಸು'' ಎಂದನು ಸೇನಾಧಿಪತಿ.

ಉತ್ತುಂಗನು ಮತ್ತೊಮ್ಮೆ ಸಭಿಕರಿಗೆ ನಮಸ್ಕರಿಸಿ



ಕಾಬೂಯಿ ಹಿಂದೆ ನಡೆದನು. ಸಭಿಕರು ಎಲ್ಲರೂ ಗೌರವದಿಂದ ಎದ್ದು ನಿಂತರು. ಕಾಬೂಯೀ ಅಪ್ಯಾಯತೆಯಿಂದ ಉತ್ತುಂಗನ ಕೈ ಹಿಡಿದು ಸಮುದ್ರ ತೀರದತ್ತ ಹೊರಟನು.

ಅವರು ಸಮುದ್ರ ತೀರಕ್ಕೆ ಸೇರಿದಾಗ ಅಲ್ಲಿ ಉತ್ತುಂಗನ ದೋಣಿಯನ್ನು ಹೂಗಳಿಂದ ಅಂದವಾಗಿ ಅಲಂಕರಿಸಿದ್ದರು. ದೋಣಿಯ ತುಂಬ ವಿಧ ವಿಧವಾದ ಕಾಣಿಕೆಗಳು ಹಣ್ಣುಗಳು ತುಂಬಿತ್ತು.

ಕಾಬೂಯಿಯ ಮಗಳು ಚಿತ್ರ, ತನ್ನ ಗೆಳತಿಯರೊಂದಿಗೆ ಎದುರಿಗೆ ಬಂದು, ಕೈಯಲ್ಲಿದ್ದ ಶತಾಬ್ಧಿಕ ಪುಷ್ಪಗಳನ್ನು ತೋರಿಸುತ್ತಾ "ಸಮುದ್ರ ಅಲೆಗಳು ಈ ಹೂಗಳನ್ನು ತೀರಕ್ಕೆ ಸೇರಿಸಿತು. ನಾನು ಅವುಗಳನ್ನು ಶೇಖರಿಸಿದೆ'' ಎಂದಳು ನಗುತ್ತಾ.

"ಹೌದೇನು? ಅವುಗಳಲ್ಲಿ ಕೆಲವನ್ನು ನನ್ನ ಕಾಣಿಕೆಯಾಗಿ ಯುವರಾಣಿಗೆ ತಲುಪಿಸಿ'' ಎಂದು ಉತ್ತುಂಗನು ನಗುತ್ತಾ ದೋಣಿಯ ಕಡೆ ನಡೆದನು.

ಕಾಬೂಯೀ ಕಡೆಯ ಬಾರಿಯಾಗಿ ಆಲಂಗಿಸಿಕೊಂಡು, ದೋಣಿಯಲ್ಲಿ ಹತ್ತಿಸಿದನು. ಅವನು ಕುಳಿತೊಡನೆ ಇಬ್ಬರು ಭಟರು ದೋಣಿಯನ್ನು ನೀರಿಗೆ ತಳ್ಳಿದರು. ಅದು ಮುಂದಕ್ಕೆ ಹೋಗಲು ಎರಡು ದೋಣಿಗಳಲ್ಲಿ ಕೆಲವು ಭಟರು ಅದರ ಹಿಂದೆ ಹೊರಟರು. ಸಂಜೆ ವೇಳೆಗೆ ಮೂರು ದೋಣಿಗಳು ಮಾಣಿಕ್ಯಪುರಿ ರಾಜ್ಯ ತೀರವನ್ನು ಸಮೀಪಿಸಿದವು. ಅವುಗಳನ್ನು ನೋಡಿದ ಕಾವಲು ಭಟರು ಆ ವಿಷಯವನ್ನು ಸೇನಾಧಿಪತಿ ಗಂಭೀರ ವರ್ಮನಿಗೆ ತಿಳಿಸಿದರು. ಆ ಸುದ್ದಿಯನ್ನು ಕೆಲವು ಭಟರ ಮೂಲಕ ರಾಜನಿಗೆ ಕಳುಹಿಸಿ, ಸೇನಾಧಿಪತಿ ತಕ್ಷಣ ಸಮುದ್ರ ತೀರಕ್ಕೆ ಹೋದನು. ಆತನು ಸಮುದ್ರ ತೀರವನ್ನು ಸೇರಿದ ಸಮಯಕ್ಕೆ ಸರಿಯಾಗಿ ಉತ್ತುಂಗನು ದೋಣಿ ಇಳಿದು ಬಂದು, ಅವನನ್ನು ಎದುರುಗೊಂಡು "ರಾಕ್ಷಸೀ ಮೃಗ ಮರಣಿಸಿತು'' ಎಂದು ಹೇಳಿದನು.

"ನೀನೇ ಅದನ್ನು ವಧಿಸಿದೆಯಾ?'' ಎಂದು ಕೇಳಿದನು ಸೇನಾಧಿಪತಿ ನಂಬಲಾರದವನಂತೆ.

"ಇಲ್ಲ. ಆ ವಿಷಯಗಳನ್ನು ವಿವರವಾಗಿ ನಂತರ ಹೇಳುತ್ತೇನೆ. ನೀವು ಎಲ್ಲರೂ ಕ್ಷೇಮವೇ? ರಾಜರು, ಯುವರಾಣಿ, ನನ್ನ ತಂಗಿ ಕ್ಷೇಮದಿಂದ ಇರುವರೆ?'' ಎಂದು ಕೇಳಿದನು ಉತ್ತುಂಗನು.

"ಎಲ್ಲರೂ ಕ್ಷೇಮವಾಗಿ ಇದ್ದಾರೆ'' ಎಂದು ಸೇನಾಧಿಪತಿ ಮಾಣಿಕ್ಯಪುರಿಯತ್ತ ಹೊರಟನು. ಆತನ ಹಿಂದೆ ಹೋಗುತ್ತಾ ರಾಕ್ಷಸೀ ಮೃಗ ಮರಣಿಸಿದ ಬಗ್ಗೆ ವಿವರಿಸಿ ಹೇಳಿದನು ಉತ್ತುಂಗನು. ಮಾಣಿಕ್ಯಪುರಿ ರಾಜಭವನದ ಮುಂದೆ ರಾಜ ಪ್ರತಾಪವರ್ಮ, ಯುವರಾಣಿ ಪ್ರಿಯಂವದೆ,

ಉತ್ತುಂಗನ ತಂಗಿ ರಜನಿ ಉತ್ತುಂಗನಿಗೆ ಎದುರಾಗಿ ಬಂದರು.

"ಭೈರಂಬಿ ಮಾತೆ ನಿನ್ನನ್ನು ರಕ್ಷಿಸಲಿ" ಎಂದು ರಾಜನು ಉತ್ತುಂಗನ ಕೈ ಹಿಡಿದು ರಾಜಭವನದ ಒಳಗೆ ಕರೆದುಕೊಂಡು ಹೋದನು.

"ರಾಕ್ಷಸೀ ಮೃಗ ಹೇಗೆ ನಾಶವಾಯಿತು. ನಿನ್ನಿಂದ ಕೇಳಬೇಕೆಂದಿದ್ದೆ" ಎಂದಳು ಯುವರಾಣಿ ಉತ್ತುಂಗನ ಹಿಂದೆ ನಡೆಯುತ್ತಾ.

"ಶಂಭುನನ್ನು ಬರ ಹೇಳಿದ್ದೇನೆ ಆತ ಬೇಗ ಬರುತ್ತಾನೆ" ಎಂದು ರಾಜನು ಉತ್ತುಂಗನು ಕುಳಿತು ಕೊಳ್ಳಲು ಆಸನವನ್ನು ತೋರಿಸಿ ತಾನೂ ಕುಳಿತು ಕೊಂಡನು.

ಮರುದಿನ ರಾಜಗುರು ಗೌರಿನಾಥನು ಬಂದು, ಉತ್ತುಂಗನು ಹೇಳಿದ್ದನ್ನೆಲ್ಲಾ ಕೇಳಿ "ರಾಕ್ಷಸೀ ಮೃಗದ ಮರಣದಿಂದ ಶತಾಬ್ಧಿಕ ಪುಷ್ಪಗಳಿಗೆ ಇದ್ದ ಶಾಪ ತೊಲಗಿತು. ಇನ್ನು ಮುಂದೆ ಆ ಹೂವುಗಳು ವರ್ಷಕ್ಕೊಮ್ಮೆ ಅರಳುವುವು" ಎಂದನು.

"ಈಗ ಈ ಹೂವಿನ ಸಸಿಗಳನ್ನು ನಮ್ಮ ಉದ್ಯಾನವನದಲ್ಲಿ ಬೆಳೆಸಬಹುದಲ್ಲವೇ ಗುರುವರ್ಯಾ" ಎಂದಳು ಯುವರಾಣಿ ಪ್ರಿಯಂವದೆ ಉತ್ಸಾಹದಿಂದ.

"ಧಾರಾಳವಾಗಿ ಬೆಳೆಸು ರಾಜಕುಮಾರಿ" ಎಂದು ಹೇಳಿದನು ರಾಜಗುರು ಗೌರಿನಾಥ ಮಂದಹಾಸ ಬೀರುತ್ತಾ.

"ಹಾಗೇ ಮಾಡು ತಾಯಿ! ಮತ್ತೊಂದು ಮಾತು. ವಿಚಿತ್ರ ಪುಷ್ಪಗಳಿಗೆ ಮಿಗಿಲಾದ ಮತ್ತೊಂದು ಅಮೂಲ್ಯವಾದ ಬಹುಮಾನವನ್ನು ನಿನಗೆ ಕೊಡಬೇಕೆಂದು ಇದ್ದೇನೆ. ತೆಗೆದುಕೊಳ್ಳುವೆಯಾ?" ಎಂದನು ರಾಜ.

"ಏನು?" ಎಂಬಂತೆ ಆಶ್ಚರ್ಯದಿಂದ ನೋಡಿದಳು ಪ್ರಿಯಂವದೆ.

"ನಿನಗೂ, ಉತ್ತುಂಗನಿಗೂ ವಿವಾಹ ಮಾಡಲು ನಿಶ್ಚಯಿಸಿದ್ದೇನೆ. ಪ್ರಜಾ ರಕ್ಷಣೆಗಾಗಿ, ಪ್ರಾಣವನ್ನು ತೃಣವಾಗಿ ಭಾವಿಸಿ ಹೋರಾಡಿದ ಉತ್ತುಂಗನು ನಿನ್ನ ಕೈ ಹಿಡಿಯಲು ತಕ್ಕವನೆಂದು ನನ್ನ ಅಭಿಪ್ರಾಯ... ನಿನಗೆ ಒಪ್ಪಿಗೆಯೋ?" ಎಂದನು ರಾಜ ಪ್ರತಾಪವರ್ಮ.

ಪ್ರಿಯಂವದೆ ನಾಚಿಕೆಯಿಂದ ತಲೆಬಾಗಿ ರಜನಿಯ ಕೈ ಹಿಡಿದಳು. ರಜನಿ ಆನಂದದಿಂದ ನಗುತ್ತಾ ಅವಳ ಕೈಯನ್ನು ತೆಗೆದು, ಮುಗುಳ್ನಗೆಯಿಂದ ನಿಂತಿದ್ದ ಅಣ್ಣ ಉತ್ತುಂಗನ ಕೈಯಲ್ಲಿ ಇಟ್ಟಳು.

(ಮುಗಿಯಿತು)

